

# ಕನ್ನಡ ಸಾಹಿತ್ಯ

9

ಸಂಚಿಕೆ



# ಸ್ನಾತಕೋತ್ತರ ಪದವಿ ಪೂರ್ವಸಿದ್ಧತಾ ಕಾರ್ಯಕ್ರಮ

# ಎಂಪಿಪಿ

# MPP

MASTER'S PREPARATORY PROGRAMME

ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ

ಮಾನಸ ಗಂಗೋತ್ರಿ, ಮೈಸೂರು - 570 006

ಉನ್ನತ ಶಿಕ್ಷಣಕ್ಕಾಗಿ ಇರುವ ಅವಕಾಶಗಳನ್ನು ಹೆಚ್ಚಿಸುವುದಕ್ಕೆ ಮತ್ತು ಶಿಕ್ಷಣವನ್ನು ಪ್ರಜಾತಂತ್ರೀಕರಿಸುವುದಕ್ಕೆ ಮುಕ್ತ ವಿಶ್ವವಿದ್ಯಾನಿಲಯ ವ್ಯವಸ್ಥೆಯನ್ನು ಆರಂಭಿಸಲಾಗಿದೆ.

**ರಾಷ್ಟ್ರೀಯ ಶಿಕ್ಷಣ ನೀತಿ 1986**

*The Open University system has been initiated in order to augment opportunities for higher education and as instrument of democrating education.*

***National Education Policy 1986***

ಮುಕ್ತ ವಿಶ್ವವಿದ್ಯಾನಿಲಯವು ದೂರಶಿಕ್ಷಣ ಪದ್ಧತಿಯಲ್ಲಿ ಬಹುಮಾಧ್ಯಮಗಳನ್ನು ಉಪಯೋಗಿಸುತ್ತದೆ. ............................ವಿದ್ಯಾಕಾಂಕ್ಷಿಗಳನ್ನು ಜ್ಞಾನ ಸಂಪಾದನೆಗಾಗಿ ಕಲಿಕಾ ಕೇಂದ್ರಕ್ಕೆ ಕೊಂಡೊಯ್ಯುವ ಬದಲು, ಜ್ಞಾನ ಸಂಪತ್ತನ್ನು ವಿದ್ಯೆ ಕಲಿಯುವವರ ಬಳಿ ಕೊಂಡೊಯ್ಯುವ ವಾಹಕವಾಗಿದೆ.

ಡಾ. ಕುಳಂದೈಸ್ವಾಮಿ

*"The Open University system makes use of Multimedia in distance education system. .............................. it is vehicle which transports knowledge to the place of learners rather than transport to the place of learning.*

***Dr. Kulandai Swamy***

## ವಿಶ್ವಮಾನವ ಸಂದೇಶ

ಪ್ರತಿಯೊಂದು ಮಗುವು ಹುಟ್ಟುತ್ತಲೇ - ವಿಶ್ವಮಾನವ. ಬೆಳೆಯುತ್ತಾ ನಾವು ಅದನ್ನು 'ಅಲ್ಪ ಮಾನವ'ನನ್ನಾಗಿ ಮಾಡುತ್ತೇವೆ. ಮತ್ತೆ ಅದನ್ನು 'ವಿಶ್ವಮಾನವ'ನನ್ನಾಗಿ ಮಾಡುವುದೇ ವಿದ್ಯೆಯ ಕರ್ತವ್ಯವಾಗಬೇಕು.

ಮನುಜ ಮತ, ವಿಶ್ವ ಪಥ, ಸರ್ವೋದಯ, ಸಮನ್ವಯ, ಪೂರ್ಣದೃಷ್ಟಿ ಈ ಪಂಚಮಂತ್ರ ಇನ್ನು ಮುಂದಿನ ದೃಷ್ಟಿಯಾಗಬೇಕಾಗಿದೆ. ಅಂದರೆ, ನಮಗೆ ಇನ್ನು ಬೇಕಾದುದು ಆ ಮತ ಈ ಮತ ಅಲ್ಲ; ಮನುಜ ಮತ. ಆ ಪಥ ಈ ಪಥ ಅಲ್ಲ; ವಿಶ್ವ ಪಥ. ಆ ಒಬ್ಬರ ಉದಯ ಮಾತ್ರವಲ್ಲ; ಸರ್ವರ ಸರ್ವಸ್ತರದ ಉದಯ. ಪರಸ್ಪರ ವಿಮುಖವಾಗಿ ಸಿಡಿದು ಹೋಗುವುದಲ್ಲ; ಸಮನ್ವಯಗೊಳ್ಳುವುದು. ಸಂಕುಚಿತ ಮತದ ಆಂಶಿಕ ದೃಷ್ಟಿ ಅಲ್ಲ; ಭೌತಿಕ ಪಾರಮಾರ್ಥಿಕ ಎಂಬ ಭಿನ್ನದೃಷ್ಟಿ ಅಲ್ಲ; ಎಲ್ಲವನ್ನು ಭಗವದ್ ದೃಷ್ಟಿಯಿಂದ ಕಾಣುವ ಪೂರ್ಣದೃಷ್ಟಿ.

ಕುವೆಂಪು

## *Gospel of Universal Man*

Every Child, at birth, is the universal man. But, as it grows, we turn it into "a petty man". It should be the function of education to turn it again into the enlightened "universal man".

The Religion of Humanity, the Universal Path, the Welfare of All, Reconciliation, the Integral Vision- these ***five mantras*** should become View of the Future. In other words, what we want henceforth is not this religion or that religion, but the Religion of Humanity ; not this path or that path, but the Universal Path ; not the well-being of this individual or that individual, but the Welfare of All ; not turning away and breaking off from one another, but reconciling and uniting in concord and harmony ; and, above all, not the partial view of a narrow creed, not the dual outlook of the material and the spiritual, but the Integral Vision of seeing all things with the eye of the Divine.

*Kuvempu*



ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ
ಮಾನಸ ಗಂಗೋತ್ರಿ
ಮೈಸೂರು - 570 006

**ಎಂ.ಎ.** (as printed: ಎಂ.ಪಿ.ಪಿ.)

**ಕನ್ನಡ ಸಾಹಿತ್ಯ**

| ಸಂಚಿಕೆಗಳು | ವಿಷಯಗಳು | |
|---|---|---|
| 1 | ಕನ್ನಡ ಸಾಹಿತ್ಯ ಚರಿತ್ರೆ<br>ಹಳಗನ್ನಡ ಸಾಹಿತ್ಯ<br>ಚಂಪೂ ಸಾಹಿತ್ಯ - ವಚನ ಸಾಹಿತ್ಯ | ಘಟಕ - 1 ಕನ್ನಡ ಸಾಹಿತ್ಯದ ಪ್ರಾಚೀನತೆ<br>ಘಟಕ - 2 ರನ್ನ, ನಾಗವರ್ಮ, ನಾಗಚಂದ್ರ, ನಯಸೇನ, ನೇಮಿಚಂದ್ರ, ರುದ್ರಭಟ್ಟ, ಜನ್ನ ಮತ್ತು ಆಂಡಯ್ಯ<br>ಘಟಕ - 3 ವಚನ ಸಾಹಿತ್ಯ : ಹಿನ್ನೆಲೆ, ಉಗಮ, ಬೆಳವಣಿಗೆ, ಲಕ್ಷಣ<br>ಘಟಕ - 4 ಪ್ರಮುಖ ವಚನಕಾರರು, ವಚನ ಸಾಹಿತ್ಯದ ಕೊಡುಗೆ |
| 2 | ಕನ್ನಡ ಸಾಹಿತ್ಯ ಚರಿತ್ರೆ<br>ನಡುಗನ್ನಡ ಸಾಹಿತ್ಯ | ಘಟಕ - 1 ರಗಳೆ : ಸ್ವರೂಪ, ಪ್ರಭೇದಗಳು<br>ಘಟಕ - 2 ಕವಿ ಹರಿಹರ ಮತ್ತು ಆತನ ಕೃತಿಗಳು<br>ಘಟಕ - 3 ಷಟ್ಪದಿ ಸಾಹಿತ್ಯ - ಪರಿಚಯ, ರಾಘವಾಂಕ : ಕವಿ, ಕೃತಿಗಳು<br>ಘಟಕ - 4 ಷಟ್ಪದಿ ಕವಿಗಳು : ಕುಮಾರವ್ಯಾಸ, ಚಾಮರಸ, ಕುಮಾರವಾಲ್ಮೀಕಿ |
| 3 | ಕನ್ನಡ ಸಾಹಿತ್ಯ ಚರಿತ್ರೆ<br>ನಡುಗನ್ನಡ ಸಾಹಿತ್ಯ | ಘಟಕ - 1 ದಾಸ ಸಾಹಿತ್ಯ : ಶ್ರೀಪಾದರಾಜರು, ಪುರಂದರ, ಕನಕ, ಜಗನ್ನಾಥದಾಸರು ಮೊದಲಾದವರು<br>ಘಟಕ - 2 ತ್ರಿಪದಿ ಸಾಹಿತ್ಯ : ಪರಿಚಯ, ಸರ್ವಜ್ಞ ಕವಿ<br>ಘಟಕ - 3 ಸಾಂಗತ್ಯ ಸಾಹಿತ್ಯ - ೧ : ದೇಪರಾಜ, ಶಿಶುಮಾಯಣ, ನಿಜಗುಣಶಿವಯೋಗಿ, ಕನಕದಾಸರು<br>ಘಟಕ - 4 ಸಾಂಗತ್ಯ ಸಾಹಿತ್ಯ - ೨ : ನಂಜುಂಡ ಕವಿ, ರತ್ನಾಕರವರ್ಣಿ, ಸಂಚಿಯ ಹೊನ್ನಮ್ಮ |
| 4 | ಕನ್ನಡ ಸಾಹಿತ್ಯ ಚರಿತ್ರೆ<br>ಆಧುನಿಕ ಕನ್ನಡ ಸಾಹಿತ್ಯ | ಘಟಕ - 1 ಹೊಸಗನ್ನಡದ ಅರುಣೋದಯ : ಭಾಗ - ೧<br>ಘಟಕ - 2 ಹೊಸಗನ್ನಡ ಅರುಣೋದಯ : ಭಾಗ - ೨<br>ಘಟಕ - 3 ನವೋದಯ ಮತ್ತು ಪ್ರಗತಿಶೀಲ ಸಾಹಿತ್ಯ<br>ಘಟಕ - 4 ನವ್ಯ ಮತ್ತು ದಲಿತ ಬಂಡಾಯ ಸಾಹಿತ್ಯ |
| 5 | ಕನ್ನಡ ಸಾಹಿತ್ಯ ಚರಿತ್ರೆ<br>ಆಧುನಿಕ ಕನ್ನಡ ಸಾಹಿತ್ಯ | ಘಟಕ - 1 ಭಾವಗೀತೆ, ಕಾದಂಬರಿ<br>ಘಟಕ - 2 ಸಣ್ಣ ಕಥೆ : ಸ್ವರೂಪ, ಲಕ್ಷಣ ಮತ್ತು ಇತಿಹಾಸ<br>ಘಟಕ - 3 ನಾಟಕ : ವಸ್ತು, ಸಂವಿಧಾನ, ರಂಗಭೂಮಿ, ನಾಟಕ ಪರಂಪರೆ<br>ಘಟಕ - 4 ಪ್ರಬಂಧ, ವಿಮರ್ಶೆ |
| 6 | ಛಂದಸ್ಸು | ಘಟಕ - 1 ಲಘು, ಯತಿ, ಪ್ರಾಸ, ಪಾದ, ಮಾತ್ರಾಗಣ ಸ್ವರೂಪ, ಕನ್ನಡ ಛಂದೋಗ್ರಂಥಗಳ ಪರಿಚಯ<br>ಘಟಕ - 2 ವರ್ಣವೃತ್ತಗಳು, ಖ್ಯಾತ ಕರ್ಣಾಟಕಗಳು; ಮಾತ್ರಾವೃತ್ತಗಳು, ಕಂದ, ರಗಳೆ, ಅಂಶವೃತ್ತಗಳು<br>ಘಟಕ - 3 ಹೊಸಗನ್ನಡ ಛಂದಸ್ಸು - ೧ : ಗಣವಿನ್ಯಾಸ, ಪ್ರಯೋಗಗಳು, ಸ್ವರಾಘಾತ, ಗಣಪರಿವೃತ್ತಿ<br>ಘಟಕ - 4 ಹೊಸಗನ್ನಡ ಛಂದಸ್ಸು - ೨ : ಮಾತ್ರೆ, ಮುಡಿ, ಪದ್ಯಗಣ |
| 7 | ಭಾರತೀಯ ಕಾವ್ಯಮೀಮಾಂಸೆ | ಘಟಕ - 1 ಮೀಮಾಂಸೆಯ ಉಗಮ, ಕಾವ್ಯದ ಆಕರ, ಪರಿಕರ, ಸಹೃದಯ, ಕಾವ್ಯ ಲಕ್ಷಣ ಇತ್ಯಾದಿ<br>ಘಟಕ - 2 ಪ್ರಸ್ಥಾನಗಳು : ಅಲಂಕಾರ, ರೀತಿ, ಧ್ವನಿ, ಔಚಿತ್ಯ, ಮೀಮಾಂಸಕರು<br>ಘಟಕ - 3 ಧ್ವನಿ ಸಿದ್ಧಾಂತ, ಧ್ವನಿ ಪ್ರಭೇದಗಳು<br>ಘಟಕ - 4 ರಸಸಿದ್ಧಾಂತ, ರಸಪ್ರಭೇದಗಳು<br>ಘಟಕ - 5 ಔಚಿತ್ಯ ತತ್ವ |
| 8 | ಸಾಹಿತ್ಯ ವಿಮರ್ಶೆ | ಘಟಕ - 1 ಪಾಶ್ಚಾತ್ಯ ವಿಮರ್ಶಕರ ಪರಿಚಯ, ವಿಮರ್ಶೆಯ ಪರಿಚಯ<br>ಘಟಕ - 2 ವಿಮರ್ಶೆಯ ಸ್ವರೂಪ<br>ಘಟಕ - 3 ವಿಮರ್ಶೆಯ ವಿಧಾನಗಳು - 1<br>ಘಟಕ - 4 ವಿಮರ್ಶೆಯ ವಿಧಾನಗಳು - 2 |
| 9 | ಕನ್ನಡ ಭಾಷೆಯ ಚರಿತ್ರೆ | ಘಟಕ - 1 ಭಾಷೆ : ಸ್ವರೂಪ, ಲಕ್ಷಣ, ವರ್ಗೀಕರಣ, ದ್ರಾವಿಡ ಭಾಷೆಗಳು, ದ್ರಾವಿಡ ಭಾಷಾವರ್ಗೀಕರಣ<br>ಘಟಕ - 2 ಕನ್ನಡ ಕರ್ನಾಟಕ ಶಬ್ದ ನಿಷ್ಪತ್ತಿ, ಕನ್ನಡ ಸಂಸ್ಕೃತ - ಸಂಬಂಧ, ಪ್ರಾಂತ ಭೇದಗಳು ಇತ್ಯಾದಿ<br>ಘಟಕ - 3 ವರ್ಣಮಾಲೆ, ನಾಮಪದ, ಲಿಂಗ, ವಚನ, ವಿಭಕ್ತಿ, ಕ್ರಿಯಾಪದ, ಗುಣವಾಚಕ, ಅವ್ಯಯ ಇತ್ಯಾದಿ<br>ಘಟಕ - 4 ಶಬ್ದಕೋಶ ಬೆಳವಣಿಗೆ, ದೇಶ್ಯ - ಅನ್ಯದೇಶ್ಯ ಪದಗಳು |
| 10 | ವ್ಯಾಕರಣ | ಘಟಕ - 1 ಶಬ್ದಮಣಿದರ್ಪಣಂ : ವ್ಯಾಕರಣ ಪರಿಚಯ, ವರ್ಣಮಾಲೆ<br>ಘಟಕ - 2 ಸಂಧಿಪ್ರಕರಣ, ನಾಮಪ್ರಕರಣ<br>ಘಟಕ - 3 ಸಮಾಸ ಪ್ರಕರಣ, ತದ್ಧಿತ ಪ್ರಕರಣ<br>ಘಟಕ - 4 ಆಖ್ಯಾತ, ಧಾತು, ಅಪಭ್ರಂಶ, ಅವ್ಯಯ ಪ್ರಕರಣ |

**ಸಂಚಿಕೆ - 9**

# ಕನ್ನಡ ಭಾಷೆಯ ಚರಿತ್ರೆ

## ಪಠ್ಯಕ್ರಮ ವಿನ್ಯಾಸ ಮತ್ತು ಸಂಪಾದಕ ಮಂಡಳಿ


**ಪ್ರೊ.ಕೆ.ಸುಧಾರಾವ್**
ಕುಲಪತಿಗಳು ಮತ್ತು ಅಧ್ಯಕ್ಷರು
ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ

ಡೀನ್ (ಶೈಕ್ಷಣಿಕ) ಸಮಾವೇಶಕರು
ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ

**ಪ್ರೊ. ಬಿ.ಎನ್. ನಾಗರಾಜ ಭಟ್** — ಸಂಪಾದಕರು
ಪ್ರಾಧ್ಯಾಪಕರು,
ಕನ್ನಡ ಅಧ್ಯಯನ ಮತ್ತು ಸಂಶೋಧನಾ ವಿಭಾಗ,
ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ,
ಮೈಸೂರು.

**ಡಾ. ಡಿ.ಟಿ. ಬಸವರಾಜ್** — ಸಂಪಾದಕರು / ಸಂಯೋಜಕರು
ಅಧ್ಯಕ್ಷರು,
ಕನ್ನಡ ಅಧ್ಯಯನ ಮತ್ತು ಸಂಶೋಧನಾ ವಿಭಾಗ,
ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ,
ಮೈಸೂರು.


## ಪಠ್ಯಕ್ರಮ ನಿರೂಪಕರು — ಸಂಚಿಕೆ - 9


**ಡಾ. ಎಸ್. ಸುಂದರಮ್ಮ** — ಘಟಕ 1 ಮತ್ತು 2
ಪ್ರಾಧ್ಯಾಪಕರು,
ಕನ್ನಡ ಅಧ್ಯಯನ ಮತ್ತು ಸಂಶೋಧನಾ ವಿಭಾಗ,
ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ, ಮೈಸೂರು.

**ಡಾ. ಡಿ.ಟಿ. ಬಸವರಾಜ್** — ಘಟಕ 3 ಮತ್ತು 4
ಹಿರಿಯ ಶ್ರೇಣಿ ಅಧ್ಯಾಪಕರು,
ಕನ್ನಡ ಅಧ್ಯಯನ ಮತ್ತು ಸಂಶೋಧನಾ ವಿಭಾಗ,
ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ,
ಮೈಸೂರು.


## ಪ್ರಕಾಶಕರು


**ಶ್ರೀ ವಿ. ರಾಮಣ್ಣ**
ಕುಲಸಚಿವರು (ಆಡಳಿತ)

ಕ.ರಾ.ಮು.ವಿ.,ಯ ಶೈಕ್ಷಣಿಕ ವಿಭಾಗದಿಂದ ಸಿದ್ಧಪಡಿಸಲಾಗಿದೆ.





ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ ಕೋರ್ಸ್‌ಗಳ ಹೆಚ್ಚಿನ ವಿವರಗಳನ್ನು ವಿಶ್ವವಿದ್ಯಾನಿಲಯದ ಕಾರ್ಯಾಲಯ, ಮಾನಸಗಂಗೋತ್ರಿ, ಮೈಸೂರು - 570 006 ಇಲ್ಲಿಂದ ಪಡೆಯಬಹುದು.

ಪ್ರಿಯ ವಿದ್ಯಾರ್ಥಿ,

ಕನ್ನಡ ಎಂ.ಎ., ವ್ಯಾಸಂಗಕ್ಕಾಗಿ ನಮ್ಮ ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯದಲ್ಲಿ ಪ್ರವೇಶ ಪಡೆದಿರುವ ತಮ್ಮನ್ನು ನಮ್ಮ ಕನ್ನಡ ವಿಭಾಗದ ಅಧ್ಯಾಪಕ ವೃಂದ ಹೃತ್ಪೂರ್ವಕವಾಗಿ ಸ್ವಾಗತಿಸುತ್ತದೆ.

ತಮ್ಮ ಕೈಯಲ್ಲಿರುವ ಈ ಸಾಮಗ್ರಿಯು ನಮ್ಮಲ್ಲಿ 'ಮುಕ್ತ' ಪದ್ಧತಿಯಲ್ಲಿ ಪ್ರವೇಶ ಪಡೆದಿರುವ ವಿದ್ಯಾರ್ಥಿಗಳಿಗೆಂದೇ ವಿಶೇಷವಾಗಿ ಸಿದ್ಧಪಡಿಸಿದುದಾಗಿದೆ. ತಾವು ತಮ್ಮ ಸ್ವಂತ ಇಚ್ಛೆ ಮತ್ತು ಪರಿಶ್ರಮದಿಂದ ಕನ್ನಡ ಸಾಹಿತ್ಯವನ್ನು ವ್ಯಾಪಕವಾಗಿ ಓದಿಕೊಂಡಿದ್ದೀರಿ ಮತ್ತು ಅಭಿಮಾನವನ್ನೂ ಬೆಳೆಸಿಕೊಂಡಿದ್ದೀರಿ ಎಂದು ಭಾವಿಸಿದ್ದೇವೆ. ಇದನ್ನು ತುಂಬು ಮನಸ್ಸಿನಿಂದ ನಾವು ಗೌರವಿಸುತ್ತೇವೆ ಕೂಡ. ಈ ಬಗೆಯಲ್ಲಿ ತಾವು ಓದುವಿಕೆಯನ್ನು ಮಾಡಿದವರಾಗಿದ್ದರೂ ಅದು ಕೆಲವೊಮ್ಮೆ ಒಂದು ಶಿಸ್ತಿಗೆ ಒಳಪಟ್ಟ ಅಧ್ಯಯನವಾಗದೆಯೂ ಇರಬಹುದು. ಇಂತಹ ಸ್ಥಿತಿಯಿಂದ ನಿರ್ದಿಷ್ಟ ಶಿಸ್ತಿನ ಪದ್ಧತಿಗೆ ಪ್ರವೇಶ ಪಡೆದಾಗ ತಮಗೆ ಕೆಲಮಟ್ಟಿಗೆ ಶೈಕ್ಷಣಿಕ ತೊಡಕು (ಕೆಲವರಿಗಾದರೂ) ಎದುರಾಗಬಹುದು. ಈ ಕೊರತೆಯನ್ನು ನೀಗುವ ಸಲುವಾಗಿ ***'ಸ್ನಾತಕೋತ್ತರ ಪದವಿ ಪೂರ್ವಸಿದ್ಧತಾ ಕಾರ್ಯಕ್ರಮ'*** **[ *Master's Preparatory Programe (MPP)* ]** ವನ್ನು ಮುಕ್ತಪದ್ಧತಿಯ ವಿದ್ಯಾರ್ಥಿಗಳಿಗೆ ರೂಪಿಸಲಾಗಿದೆ. ಸಾಂಪ್ರದಾಯಿಕ ಶಿಕ್ಷಣ ಪದ್ಧತಿಯಲ್ಲಿ ಒಬ್ಬ ವಿದ್ಯಾರ್ಥಿ (ಬಿ.ಎ., ಪದವಿಯವರೆಗೆ) ವ್ಯಾಸಂಗ ಮಾಡಿರುವ ವಸ್ತು-ವಿಷಯಗಳ ಸ್ಥೂಲ ಮಾಹಿತಿಯನ್ನು ಈ (ಎಂಪಿಪಿ) ಸಾಮಗ್ರಿಯಲ್ಲಿ ಅಳವಡಿಸಲಾಗಿದೆ. ಮುಕ್ತ ಪದ್ಧತಿಯಲ್ಲಿ ಪ್ರವೇಶ ಪಡೆದ ತಮಗೆ ಈ ಸಾಮಗ್ರಿಯು ಕನ್ನಡ ಎಂ.ಎ. ವ್ಯಾಸಂಗಕ್ಕೆ ಸೂಕ್ತ ತಳಹದಿಯನ್ನು ನೀಡುವುದರೊಂದಿಗೆ ಆತ್ಮವಿಶ್ವಾಸವನ್ನು ಮೂಡಿಸುತ್ತದೆ.

ಕನ್ನಡ ಸಾಹಿತ್ಯ ಕುರಿತ 10 ಸಂಚಿಕೆಗಳಲ್ಲಿ ಇದು 9 ನೆಯದು. ಇದರಲ್ಲಿ ಕನ್ನಡ ಭಾಷಾ ಚರಿತ್ರೆಗೆ ಸಂಬಂಧಪಟ್ಟ ವಿಷಯಗಳಾದ ಕನ್ನಡ, ಕರ್ಣಾಟಕ ಶಬ್ದ ನಿಷ್ಪತ್ತಿ, ಕನ್ನಡ ಸಂಸ್ಕೃತ - ಸಂಬಂಧ, ಪ್ರಾಂತ ಭೇದಗಳು: ವರ್ಣಮಾಲೆ, ನಾಮಪದ, ಲಿಂಗ, ವಚನ, ವಿಭಕ್ತಿ, ಕ್ರಿಯಾಪದ, ಗುಣವಾಚಕ, ಅವ್ಯಯ : ಶಬ್ದಕೋಶ ಬೆಳವಣಿಗೆ, ದೇಶ್ಯ - ಅನ್ಯದೇಶ್ಯ ಪದಗಳು ಮೊದಲಾದ ಸಂಗತಿಗಳನ್ನು ದ್ರಾವಿಡ ಭಾಷೆಗಳು, ದ್ರಾವಿಡ ಭಾಷಾವರ್ಗೀಕರಣಗಳ ಜೊತೆಗೆ ಭಾಷೆ : ಸ್ವರೂಪ, ಲಕ್ಷಣ ಮತ್ತು ಅದರ ವರ್ಗೀಕರಣದಂತಹ ವಿಚಾರಗಳೊಂದಿಗೆ ಪ್ರಸ್ತಾಪಿಸಲಾಗಿದೆ.

ಈ ಸಾಮಗ್ರಿಯಲ್ಲಿನ ವಿಷಯಗಳನ್ನು ಸೂಕ್ಷ್ಮವಾಗಿ ತಾವು ಓದಬೇಕು, ಒಂದೊಂದು ಅಂಕಗಳಿಗೆ ಉತ್ತರಿಸಬಹುದಾದ 'ವಸ್ತುನಿಷ್ಠ' (Objective Type) ಪ್ರಶ್ನೆಗಳನ್ನು ತಾವೇ ಸಿದ್ಧಪಡಿಸಿಕೊಂಡು ಉತ್ತರಗಳನ್ನು ಕಂಡುಕೊಂಡು ಈ ಸಾಮಗ್ರಿ ಕುರಿತ ಪರೀಕ್ಷೆಗೆ ಸಿದ್ಧವಾಗಬೇಕು ಎಂದು ಸೂಚಿಸುತ್ತ; ಈ ಸಾಮಗ್ರಿಯ ಓದು ತಮಗೆ ಉದ್ದಿಷ್ಟಫಲವನ್ನು ನೀಡಲಿ ಎಂದು ಆಶಿಸುತ್ತೇವೆ.

ಅಧ್ಯಾಪಕ ವೃಂದದ ಪರವಾಗಿ
ತಮ್ಮ ವಿಶ್ವಾಸಿ
**ಡಾ. ಡಿ.ಟಿ. ಬಸವರಾಜ್**
ಅಧ್ಯಕ್ಷರು, ಕನ್ನಡ ಅಧ್ಯಯನ ಮತ್ತು ಸಂಶೋಧನಾ ವಿಭಾಗ
ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ, ಮೈಸೂರು.

ಸಂಚಿಕೆ - 9

# ಕನ್ನಡ ಭಾಷೆಯ ಚರಿತ್ರೆ

ಘಟಕ - 1

## ಭಾಷೆ : ಸ್ವರೂಪ, ಲಕ್ಷಣ, ವರ್ಗೀಕರಣ, ದ್ರಾವಿಡ ಭಾಷೆಗಳು

ಪರಿವಿಡಿ :

## 1.0 ಉದ್ದೇಶ

- ಭಾಷೆ ಎಂಬ ಮಾತಿಗೆ ಇರುವ ವ್ಯಾಪ್ತಿಯನ್ನು ಕಂಡು ಹಿಡಿಯುವುದು.
- ಭಾಷಾ ವಿಜ್ಞಾನಿಗಳು ಭಾಷೆಯ ಬಗ್ಗೆ ಹೇಳಿರುವ ವ್ಯಾಖ್ಯಾನಗಳನ್ನು ಪರಿಶೀಲಿಸುವುದು.
- ಭಾಷೆಯ ಸ್ವರೂಪ ಲಕ್ಷಣಗಳನ್ನು ವಿವರಿಸುವುದು.
- ಭಾಷೆಗಳ ವರ್ಗೀಕರಣವನ್ನು ಮಾಡಿರುವ ವಿಧಾನವನ್ನು ಅಧ್ಯಯನ ಮಾಡುವುದು.
- ಪ್ರಪಂಚದಲ್ಲಿರುವ ಭಾಷಾ ಪರಿವಾರಗಳನ್ನು ಮತ್ತು ಭಾಷಾ ವರ್ಗಗಳನ್ನು ವಿಂಗಡಿಸುವ ವಿಧಾನವನ್ನು ಕಂಡುಕೊಳ್ಳುವುದು.
- ದ್ರಾವಿಡ ಭಾಷಾ ಪರಿವಾರವು ಭಾರತದ ಯಾವ ಯಾವ ಭಾಗಗಳಲ್ಲಿ ಹಬ್ಬಿದೆ ಎಂಬುದನ್ನು ತಿಳಿಯುವುದು ಮತ್ತು ದ್ರಾವಿಡ ಭಾಷೆಗಳ ಲಕ್ಷಣಗಳನ್ನು ವಿವರಿಸುವುದು ಈ ಘಟಕದ ಉದ್ದೇಶವಾಗಿದೆ.

## 1.1 ಪೀಠಿಕೆ

ಮಾನವ ಜಗತ್ತಿನ ಸಂಶೋಧನೆಗಳು ಒಂದಲ್ಲ ಹಲವು. ಈ ಸಂಶೋಧನೆಗಳ ಪೈಕಿ ಭಾಷೆಯ ಬಳಕೆಯನ್ನು ಕಂಡುಕೊಂಡದ್ದು ಸಾಮಾನ್ಯವಾದುದಲ್ಲ. ವಿಕಾಸವಾದದ ಪಿತಾಮಹ ಡಾರ್ವಿನ್ ಭಾಷೆಯ ಶೋಧನೆಯಷ್ಟು ಮಹತ್ವದ್ದು ಬೇರೆ ಯಾವುದೂ ಇಲ್ಲ ಎಂದು ಹೇಳಿದ್ದಾನೆ. ಆದಿ ಮಾನವನು ತನ್ನ ಭಾವ, ಭಾವನೆ, ಆಲೋಚನೆ, ಚಿಂತನೆ ಇತ್ಯಾದಿಗಳನ್ನು ಪ್ರಕಟಿಸಲು ಭಾಷೆಯು ಅನಿವಾರ್ಯವಾಗಿತ್ತು. ಕೈ, ಬಾಯಿ, ಸನ್ನೆಗಳ ಮೂಲಕ ದೇಹ ಭಾಷೆಯ (ಬಾಡಿ ಲಾಂಗ್ವೇಜ್) ಮೂಲಕ ಎಷ್ಟು ತಾನೆ ಸಂವಹನಗೊಳಿಸಲು ಸಾಧ್ಯವಾಗುತ್ತದೆ? ಆದ್ದರಿಂದ ಬದುಕಿಗೆ ಭಾಷೆಯಷ್ಟು ಪ್ರಯೋಜನಕಾರಿಯಾದುದು ಯಾವುದೂ ಇಲ್ಲವೆಂದು ಹೇಳಬೇಕಾಗುತ್ತದೆ. ಆದರೆ ಭಾಷೆಯು ಹುಟ್ಟಿದ ಬಗೆ ಹೇಗೆ ಎಂಬುದು ಚಿದಂಬರ ರಹಸ್ಯವೇ ಆಗಿಬಿಟ್ಟಿದೆ. ಆದರೂ ಭಾಷೆಯು ಹುಟ್ಟಿರಬಹುದಾದ ಹಿನ್ನೆಲೆಯನ್ನು ಅನೇಕ ವಿದ್ವಾಂಸರು ಶೋಧಿಸಲು ಪ್ರಯತ್ನಿಸಿದ್ದಾರೆ. ದೇವರಿಂದಲೆ ಭಾಷೆ ಸೃಷ್ಟಿಯಾಯಿತೆಂದು ಧಾರ್ಮಿಕ ಶ್ರದ್ಧೆಯುಳ್ಳವರು ಭಾವಿಸುತ್ತಾರೆ. ನಾಗವರ್ಮನು ಛಂದೋಂಬುದಿಯಲ್ಲಿ ಒಂದು ವಿಚಾರವನ್ನು ತಿಳಿಸುತ್ತಾನೆ. ಅದೇನೆಂದರೆ ಪ್ರಪಂಚದ ಎಲ್ಲಾ ಭಾಷೆಗಳೂ ಮೂರುವರೆ ಭಾಷೆಗಳಿಂದ ಹುಟ್ಟಿವೆ ಎಂದು ಹೇಳುತ್ತಾನೆ. ಅವುಗಳೆಂದರೆ ಸಂಸ್ಕೃತ, ಪ್ರಾಕೃತ, ಅಪಭ್ರಂಶ ಮತ್ತು ಅರ್ಧ ಭಾಷೆ ಪೈಶಾಚೀ. ಭಾಷೆಯ ದೈವತ್ವವನ್ನು ಇಂದಿನ ವೈಜ್ಞಾನಿಕ ಯುಗದಲ್ಲಿ ಪ್ರತಿಪಾದಿಸುವುದು ಸೂಕ್ತವೆನ್ನಿಸುವುದಿಲ್ಲ. ಹಾಗೆಯೆ ಒಬ್ಬನೆ ಒಬ್ಬನಿಂದ ಭಾಷೆ ಸೃಷ್ಟಿಯಾಗುತ್ತದೆಂಬುದೂ ಸರಿಯಲ್ಲ. ಹಾಗಾದರೆ ಭಾಷೆ ಎಂದರೇನು?

## 1.2 ಭಾಷೆ ಎಂದರೇನು ?

ಹೌದು ಭಾಷೆ ಎಂದರೇನು? ನಾವು ಮಾತನಾಡುತ್ತಿದ್ದೇವಲ್ಲ ಅದೇನೇ ಭಾಷೆ ಎಂದು ಸುಲಭವಾಗಿ ಹೇಳಿಬಿಡಬಹುದು. ಇದು ಸಾಮಾನ್ಯರು ಹೇಳಿ ಬಿಡುವ ಸರಳವಾದ ಮಾತು. ನಮಗೆ

ಬೇಕಾದದ್ದು ಇಷ್ಟು ಸರಳವಾದ ವಿವರಣೆಯಲ್ಲ. ವೈಜ್ಞಾನಿಕವಾಗಿ ಆಲೋಚನೆ ಮಾಡುವವರಿಗೆ ಸಮ್ಮತವಾಗುವಂಥ ವ್ಯಾಖ್ಯಾನ ಬೇಕಾಗುತ್ತದೆ. ಸುಮಾರು ೨೦೦ ವರ್ಷಗಳಿಂದೀಚೆಗೆ ಬೆಳೆದು ಬಂದಿರುವ ಭಾಷಾ ವಿಜ್ಞಾನವು ಆಶ್ಚರ್ಯಕರ ಶೋಧನೆಗಳನ್ನು ಮಾಡಿದೆ. ಆಧುನಿಕ ಭಾಷಾ ವಿಜ್ಞಾನಿಗಳು ಭಾಷೆ ಎಂದರೇನು? ಎಂಬ ಪ್ರಶ್ನೆಗೆ ಉತ್ತರ ಕೊಡಲು ಪ್ರಯತ್ನಿಸಿದ್ದಾರೆ. 'ಮನುಷ್ಯರು ತಮ್ಮ ಮನಸ್ಸಿನ ಭಾವ ಭಾವನೆಗಳನ್ನು ಭಾವಾವೇಶಗಳನ್ನು ಆಸೆಗಳನ್ನು ಸ್ವಪ್ರೇರಿತ ಧ್ವನಿ ಸಂಕೇತಗಳಿಂದ ಸಂವಹನ ಮಾಡುವ ವಿಧಾನ' ಎಂದು ಸಪೀರ್ ಎಂಬ ಭಾಷಾ ವಿಜ್ಞಾನಿ ತಿಳಿಸುತ್ತಾರೆ. ಕ್ರೋಚೆಯವರ ಪ್ರಕಾರ 'ವ್ಯವಸ್ಥಿತವಾದ ಶಬ್ದ ಸಮುದಾಯನ್ನೊಳಗೊಂಡು ವಿಚಾರದ ಅಭಿವ್ಯಕ್ತಿಗೆ ಕಾರಣವಾಗುವ ಮಾಧ್ಯಮವೇ ಭಾಷೆ' ಎನ್ನುವುದು ತಿಳಿದು ಬರುತ್ತದೆ. ಹ್ಯಾಲಿಡೆ ಎಂಬುವರು 'ನಿರ್ದಿಷ್ಟವಾದ ಸಾಮಾಜಿಕ ಸಂದರ್ಭಗಳಲ್ಲಿ ಬಳಸಬಹುದಾದ ವ್ಯವಸ್ಥಿತವಾದ ಶಬ್ದಗಳ ಸಮೂಹವೇ ಭಾಷೆ' ಎನ್ನುತ್ತಾರೆ. ಎರ್ಡ್‌ಮನ್ ಅವರು 'ಭಾಷೆಯು ಒಂದು ಸಾಧನ, ಮನುಷ್ಯರ ವಿಶಿಷ್ಟ ಆಲೋಚನೆಗಳಿಗೆ ಸಹಾಯ ಮಾಡುವ ಉಪಕರಣ' ಎಂದು ಹೇಳುತ್ತಾರೆ. ಮಾರ್ಟಿಯವರ ಪ್ರಕಾರ 'ನಮ್ಮ ಅಂತರಂಗದಲ್ಲಿರುವುದನ್ನು ಉಚ್ಚರಿತ ಧ್ವನಿಗಳ ಮೂಲಕ ವ್ಯಕ್ತಪಡಿಸುವ ಸಾಧನವೇ ಭಾಷೆ'.

ವಿಟ್ನಿ ಎಂಬ ವಿದ್ವಾಂಸರು ಭಾಷೆಯ ತಿರುಳನ್ನು ತಿಳಿಯಲು ಪ್ರಯತ್ನಿಸಿದ್ದಾರೆ. ಮನುಷ್ಯರು ತಮ್ಮ ಆಲೋಚನೆಗಳನ್ನು ಇತರರಿಗೆ ತಿಳಿಯಪಡಿಸುವ ಸಲುವಾಗಿ ಉದ್ದೇಶ ಪೂರ್ವಕವಾಗಿ ಬಳಸುವ ಸಾಧನವೇ ಭಾಷೆ ಎಂದು ಅವರು ಹೇಳುತ್ತಾರೆ. ಎಬ್ಬಿಂಗ್ ಹೌಸ್ ಎಂಬ ಇನ್ನೊಬ್ಬ ವಿದ್ವಾಂಸರು ಇನ್ನಷ್ಟು ಸ್ಪಷ್ಟಗೊಳಿಸಲು ಪ್ರಯತ್ನಿಸಿದ್ದಾರೆ. ಮನುಷ್ಯರು ತಮ್ಮ ಮನಸ್ಸಿಗೆ ಬಂದಾಗ ಕಾಲದ ವಿಚಾರವನ್ನು ಮಾಡದೆ ಬಾಯಿಯಿಂದ ಉಚ್ಚರಿಸಬಹುದಾದ ನಿರ್ದಿಷ್ಟ ಸಂಕೇತಗಳನ್ನು ಒಳಗೊಂಡಿರುವ ವ್ಯವಸ್ಥೆಯನ್ನು ಭಾಷೆ ಎಂದು ಅವರು ಕರೆದಿದ್ದಾರೆ. ಭಾಷೆಯಲ್ಲಿ ಧ್ವನಿ ಸಂಕೇತಗಳಿರುತ್ತವೆ. ಧ್ವನಿಗಳು ನಮ್ಮ ಧ್ವನ್ಯಂಗಗಳಿಂದ ಹೊರಡುತ್ತವೆ. ಕಂಠದಿಂದ ಹಿಡಿದು ತುಟಿಯವರೆಗೆ ಬೇರೆ ಬೇರೆ ಧ್ವನಿಗಳು ಹೊರಡುತ್ತವೆ. ಧ್ವನಿ ಹೊರಡಿಸುವಿಕೆಯಲ್ಲಿ ಮೊದಲ ಘಟನೆ ಯಾವುದು? ಮನಸ್ಸಿನಲ್ಲಿ ಸಂಕಲ್ಪ ಮೂಡುವುದೇ ಪ್ರಥಮ ಘಟನೆ. ಇದೇ ಸಂಕಲ್ಪವು ಎದೆ ಮತ್ತು ಕಂಠಭಾಗದಲ್ಲಿ ಸ್ವಲ್ಪ ಕಾಲ ಮುಂದುವರಿದು ಶಬ್ದವಾಗಿ ವ್ಯಕ್ತವಾಗುವುದೇ ಎರಡನೆಯ ಹಂತ. ಸಂಕಲ್ಪವು ಕಿವಿಗೆ ಕೇಳಿಸುವ ಧ್ವನಿಯಾಯಿತು, ಮಾತಾಯಿತು ಮತ್ತು ಮುಖದಿಂದ ಹೊರಬಿದ್ದು ಗಾಳಿಗೆ ಸೇರಿತು. ಗಾಳಿಯಲ್ಲಿ ಅಲೆಗಳು ಉಂಟಾದುವು. ಆ ಅಲೆಗಳು ನಮ್ಮ ಕಿವಿಗೂ ಮತ್ತು ಇತರರ (ಹತ್ತಿರದಲ್ಲಿರುವ) ಕಿವಿಗೂ ತಲುಪುತ್ತವೆ. ಈ ಶಬ್ದಕ್ಕೆ ವೈಖರಿ ಎಂದು ಸಂಸ್ಕೃತದಲ್ಲಿ ಕರೆಯುತ್ತಾರೆ. ಧ್ವನಿಯನ್ನು ಹುಟ್ಟಿಸುವ ಅಂಗಗಳು ಯಾವುವು? ಮೊದಲು ಶ್ವಾಸಕೋಶಗಳು ಅನಂತರ ತುಟಿಯವರೆಗೆ ಅಲ್ಲಲ್ಲಿ ಇರುವ ವಿವಿಧ ಅಂಗಗಳು. ಧ್ವನಿ ಪೆಟ್ಟಿಗೆಯೂ ಒಂದು ಪ್ರಮುಖವಾದ ಅಂಗ. ಈ ಧ್ವನಿ ಪೆಟ್ಟಿಗೆಯಿಂದ ಹೊರಟ ಶಬ್ದವು ನಮ್ಮ ಗಂಟಲು, ಮೂಗು, ಬಾಯಿಗಳಿಂದ ಹೊರಬಿದ್ದಾಗ ಅದು ಮನುಷ್ಯನು ಮಾಡುವ ಧ್ವನಿಯಾಗಿರುತ್ತದೆ. ಶ್ವಾಸಕೋಶದಿಂದ ಹೊರಟ ಉಸಿರಿನ ಒತ್ತಡವನ್ನು ಅವಲಂಬಿಸಿ ಮೂರು ಬಗೆಯ ಶಬ್ದಗಳು ಉಂಟಾಗುತ್ತವೆ. ಎದೆಯ ಭಾಗದಲ್ಲಿ ಉಚ್ಚರಿಸಲ್ಪಡುವ ಶಬ್ದ ಸಾಮಾನ್ಯವಾಗಿ ಮೃದುವಾಗಿರುತ್ತದೆ. ಉಸಿರಿನ ಬಲ ಇನ್ನೂ ಹೆಚ್ಚಾಗಿದ್ದರೆ ಅದನ್ನು ಮಧ್ಯಮ ಎನ್ನುತ್ತಾರೆ. ಉಸಿರು ತುಂಬಾ ಬಲವಾಗಿದ್ದ ಪಕ್ಷದಲ್ಲಿ ತಲೆಯ ಅಂಗಾಂಗಗಳೂ ಭಾಗವಹಿಸುವಂತಾದರೆ ಶಬ್ದವು ಕರ್ಕಶವಾಗಿರುತ್ತದೆ. ಉಚ್ಚಾರಣೆಯನ್ನು ಅನುಸರಿಸಿ ಅಲ್ಪಪ್ರಾಣ, ಮಹಾಪ್ರಾಣಗಳು ಸೃಷ್ಟಿಯಾಗುತ್ತದೆ. ಉಚ್ಚಾರಣೆಯ ಕಾಲಭೇದದಿಂದ ಹ್ರಸ್ವ ಮತ್ತು ದೀರ್ಘ ವರ್ಣಗಳು ಗೊತ್ತಾಗುತ್ತವೆ. ಕಂಠ ಭಾಗದಿಂದ

ಹೊರಡುವ ಕ ವರ್ಗದ ಧ್ವನಿಗಳನ್ನು ಕಂಠ್ಯ ಎನ್ನುತ್ತಾರೆ. ತಾಲು ಭಾಗದಿಂದ (ಹಲ್ಲಿನ ಬುಡದಿಂದ ಸ್ವಲ್ಪ ಹಿಂದಕ್ಕೆ) ಹುಟ್ಟುವ ಚ ವರ್ಗದ ಧ್ವನಿಗಳನ್ನು ತಾಲವ್ಯಗಳೆನ್ನುತ್ತಾರೆ. ಬಾಯಿಯ ಒಳಗೆ ಮೇಲ್ಭಾಗದ ಅರ್ಧಚಂದ್ರಾಕೃತಿಯ ಗಟ್ಟಿ ಭಾಗವನ್ನು ಮುಟ್ಟಿ ಹೊರಡುವ ಟ ವರ್ಗದ ಧ್ವನಿಗಳನ್ನು ಮೂರ್ಧನ್ಯಗಳು ಎನ್ನುತ್ತಾರೆ. ನಾಲಗೆಯ ತುದಿಯು ಹಲ್ಲುಗಳ ಬುಡವನ್ನು ಸ್ಪರ್ಶಿಸಿ ಉಚ್ಚರಿಸಲಾಗುವ ತ ವರ್ಗದ ಧ್ವನಿಗಳನ್ನು ದಂತ್ಯಗಳೆನ್ನುತ್ತಾರೆ. ಇದುವರೆಗಿನ ಧ್ವನಿಗಳನ್ನು ಹೊರಡಿಸುವಾಗ ತುಟಿಗಳನ್ನು ಬಳಸಿಕೊಳ್ಳಲಿಲ್ಲ ಎಂಬುದನ್ನು ಗಮನಿಸಿರಿ. ತುಟಿಗಳನ್ನು ಮಾತ್ರವೇ ಉಪಯೋಗಿಸಿ ಹೊರಡಿಸುವ ಧ್ವನಿಗಳನ್ನು ಓಷ್ಠ್ಯಗಳೆನ್ನುತ್ತಾರೆ. ಗಾಳಿಯ ಸ್ವಲ್ಪಭಾಗವು ಮೂಗಿನ ಮೂಲಕ ಹೋಗುವಂತೆ ಮಾಡಿದಾಗ ಅನುನಾಸಿಕ ಧ್ವನಿಗಳುಂಟಾಗುತ್ತವೆ. ಶ್ವಾಸದ ಗಾಳಿಯು ಎಲ್ಲಿಯೂ ಒತ್ತಡಕ್ಕೆ ಅಡಚಣೆಗೆ ಗುರಿಯಾಗದೆ ಹೊರಗೆ ಹೋಗುವಾಗ, ನಾಲಗೆಯ ಬೆಂಬಲದಿಂದ ಕೆಲವೊಂದು ಧ್ವನಿಗಳುಂಟಾಗುತ್ತವೆ. ಅವುಗಳೇ ಸ, ಶ, ಷ ಇತ್ಯಾದಿಗಳು. ಅವುಗಳನ್ನು ಊಷ್ಮ ಧ್ವನಿಗಳೆನ್ನುತ್ತಾರೆ. ಧ್ವನ್ಯಂಗಗಳಿಂದ ಹೊರಡುವ ಎಲ್ಲ ಧ್ವನಿಗಳೂ ಅರ್ಥಪೂರ್ಣವಾಗಿ ಇರಬೇಕಾಗಿಲ್ಲ. ಕೆಲವು ಅರ್ಥಭೇದವನ್ನು ಉಂಟುಮಾಡುತ್ತವೆ. ಅಂತಹ ಧ್ವನಿಗಳನ್ನು ಧ್ವನಿಮಾ ಎಂದು ಕರೆಯುತ್ತಾರೆ. ಧ್ವನಿಮಾಗಳು ಒಂದು ರೀತಿಯಲ್ಲಿ ಜೋಡಣೆಗೊಂಡಾಗ ಪದಾಂಶಗಳು ಹುಟ್ಟುತ್ತವೆ.

ಈಗ ಮತ್ತೆ ಎಬ್ಬಿಂಗ್ ಹೌಸ್‌ರವರು ಹೇಳುವ ಸಂಕೇತಗಳ ವಿಚಾರಕ್ಕೆ ಬರಬಹುದು. ಭಾಷೆಯಲ್ಲಿ ಧ್ವನಿ ಸಂಕೇತಗಳಿರುತ್ತವೆ. ಧ್ವನಿ ಸಂಕೇತಗಳು ಪದಾಂಶಗಳಾಗಿ ಆಕೃತಿಮಾ ಎನ್ನಿಸಿಕೊಳ್ಳುತ್ತವೆ. ಮಾನಸಿಕ ಮಂದ ಬೆಳವಣಿಗೆಯ ಮಕ್ಕಳು ಹೊರಡಿಸುವ ಅಸ್ಪಷ್ಟ ಧ್ವನಿಗಳನ್ನು ಗಮನಿಸಿದರೆ ನಿಮಗೆ ಆದಿ ಮಾನವನು ಮಾತನ್ನು ಬಳಸಲು ಎಷ್ಟು ಕಷ್ಟಪಟ್ಟಿರಬಹುದು ಎಂಬುದು ತಿಳಿಯುತ್ತದೆ. ಧ್ವನಿ ಸಂಕೇತಗಳು ಸೃಷ್ಟಿಯಾದದ್ದು ಭಾಷೆಯ ಬೆಳವಣಿಗೆಗೆ ನಾಂದಿ ಹಾಡಿದಂತೆಯೇ ಸರಿ. ಐಸ್ಲರ್ ಎಂಬ ವಿದ್ವಾಂಸರು 'ಮನಸ್ಸಿರುವ ಯಾವುದೇ ಪ್ರಾಣಿಯ ಅನುಭವಗಳ ಅಭಿವ್ಯಕ್ತಿಯೇ ಭಾಷೆ' ಎನ್ನುತ್ತಾರೆ. ಇವರು ಧ್ವನಿ ಅಥವಾ ಧ್ವನಿಸಂಕೇತಗಳ ಬಗ್ಗೆ ಏನನ್ನೂ ಹೇಳುವುದಿಲ್ಲ. ಮಾರ್ಟಿಯವರು ಭಾಷೆಯು ಉಚ್ಚರಿತ ಧ್ವನಿಗಳ ಮೂಲಕ ಮನಸ್ಸಿನಲ್ಲಿರುವುದನ್ನು ವ್ಯಕ್ತಪಡಿಸುವ ಒಂದು ಸಾಧನ ಎಂದು ಹೇಳುವಾಗ 'ಉಚ್ಚರಿತಧ್ವನಿ' ಗಳ ವಿಚಾರವನ್ನು ಪ್ರಸ್ತಾಪಿಸಿರುವುದನ್ನು ಮತ್ತೊಮ್ಮೆ ನೆನಪಿಗೆ ತಂದುಕೊಳ್ಳಿರಿ. ಭಾಷೆಯು ಧ್ವನಿ ಸಮೂಹ ಮಾತ್ರವಾಗಿರುವುದಿಲ್ಲ. ಧ್ವನಿ, ಧ್ವನಿಮಾ ಇತ್ಯಾದಿಗಳು ಭಾಷೆಯ ಮೂಲಭೂತ ಅಂಶಗಳೆಂಬುದು ನಿಜ. ಆದರೆ ಅದೇ ಭಾಷೆಯಾಗುವುದಿಲ್ಲ. ಪ್ರಪಂಚದಲ್ಲಿ ಎಷ್ಟೊಂದು ಭಾಷೆಗಳಿವೆ ನೋಡಿ. ಟೈಗರ್ ಎಂದರೆ ಇಂಗ್ಲಿಷ್ ಗೊತ್ತಿಲ್ಲದವರಿಗೆ ಅರ್ಥವಾಗುವುದಿಲ್ಲ. ಹುಲಿ ಎಂದರೆ ಅದೇನೆಂದು ಕನ್ನಡಿಗರಿಗೆ ತಿಳಿಯುತ್ತದೆ. (ಚಿತ್ರದಲ್ಲಿ, ಜೂ ನಲ್ಲಿ, ಕಾಡಿನಲ್ಲಿ ನೋಡಿದ್ದರೆ) ಟೈಗರ್ ಎಂಬಲ್ಲಿಯೂ ಧ್ವನಿಗಳಿವೆ. ಟ, ಗ, ರ ಮುಂತಾದ ಧ್ವನಿಗಳು ಟೈಗರ್ ಪದದಲ್ಲಿವೆ. ಹ, ಲ ಎಂಬ ಧ್ವನಿಗಳು ಕನ್ನಡದ ಹುಲಿ ಎಂಬ ಪದದಲ್ಲಿವೆ. ಆದರೆ ಧ್ವನಿಗಳು ಇದ್ದ ಮಾತ್ರಕ್ಕೆ ಭಾಷೆ ಅರ್ಥವಾಗುವುದಿಲ್ಲ. ಧ್ವನಿಗಳ ಜೋಡಣೆ ನಿರ್ದಿಷ್ಟ ರೀತಿಯಲ್ಲಿ ಆಗಿರುತ್ತದೆ ಮತ್ತು ವಸ್ತುವಿಗೂ ಧ್ವನಿ ಸಂಕೇತಗಳಿಗೂ ಸಂಬಂಧವಿರುತ್ತದೆ. ಆದ್ದರಿಂದಲೇ ಮನುಷ್ಯನ ಧ್ವನ್ಯಂಗಗಳಿಂದ ಒಂದೇ ಬಗೆಯ ಧ್ವನಿಗಳು ಹೊರಟರೂ ಭಾಷೆ ಒಂದೇ ಆಗಿರುವುದಿಲ್ಲ. ಧ್ವನಿಜೋಡಣೆಯಿಂದ ಅರ್ಥ ಸ್ಫುರಿಸಬೇಕಾದರೆ ಅದೇ ಪರಿಸರದಲ್ಲಿ ಇರುವವರಾಗಿರಬೇಕು. ಮನುಷ್ಯರ ಅಭಿಪ್ರಾಯಗಳಲ್ಲಿ ಮೂಲತಃ ಏಕತೆ ಇದ್ದರೂ ಅವರು ಬಳಸುವ ಸಂಕೇತಗಳು ಭಿನ್ನವಾಗಿರುತ್ತವೆ. ಸ್ಪುರ್ಟೆವಾ ಮತ್ತು ಟ್ರಾಗರ್ ಅವರ ಅಭಿಪ್ರಾಯದಲ್ಲಿ ಸ್ವತಂತ್ರ ಧ್ವನಿ ಸಂಕೇತಗಳ ವ್ಯವಸ್ಥೆಯೆ ಭಾಷೆ ಎನ್ನಿಸಿಕೊಳ್ಳುತ್ತದೆ. ಭಾಷೆಯು ಸುವ್ಯವಸ್ಥಿತವಾಗಿ

ಇಲ್ಲದಿದ್ದರೆ ಸಂವಹನವು ಸಾಧ್ಯವಾಗುವುದಿಲ್ಲ. ಅಷ್ಟೇ ಅಲ್ಲ, ಮಾನಸಿಕ ಸುಸ್ಥಿತಿಯೂ ಇಲ್ಲಿ ಮುಖ್ಯವಾದುದು. ಸಂಕೇತಗಳು ರೂಢಿಯಿಂದಾಗಿ ಅರ್ಥವನ್ನು ಪಡೆದುಕೊಳ್ಳುತ್ತವೆ. ಸಂಕೇತಗಳು ಪ್ರಾದೇಶಿಕವಾಗಿ ವ್ಯತ್ಯಾಸವಾಗುವುದುಂಟು. ಹಾಲು ಮತ್ತು ನೆಮ ಎಂಬ ಶಬ್ದಗಳಲ್ಲಿ ಧ್ವನಿ ಸಂಕೇತಗಳೇನೋ ಇವೆ. ಆದರೆ ಹಾಲು ಎಂಬುದಕ್ಕೆ ಕನ್ನಡದಲ್ಲಿ ಅರ್ಥವಿದೆ. ನೆಮ ಎಂಬುದಕ್ಕೆ ಅರ್ಥವಿಲ್ಲ. ಆದ್ದರಿಂದ ಭಾಷೆಯನ್ನು ಉಚ್ಚರಿತ ಧ್ವನಿ ಸಂಕೇತಗಳ ವ್ಯವಸ್ಥೆ ಎಂದು ಹೇಳಲಾಗುತ್ತದೆ. ಮುಂದೆ ಹುಟ್ಟುವ ಪ್ರಶ್ನೆ ಎಂದರೆ ಈ ಧ್ವನಿ ಸಂಕೇತಗಳು ಕಡ್ಡಾಯ ಸ್ವರೂಪವನ್ನು ಹೊಂದಿವೆಯೆ ಎಂಬುದು. ಅವುಗಳು ಕಡ್ಡಾಯವಲ್ಲ, ಶಾಶ್ವತವಲ್ಲ, ಬೇಕೆಂದರೆ ಬದಲಾಯಿಸಬಹುದು. ಆದ್ದರಿಂದ ಅವುಗಳನ್ನು ಯಾದೃಚ್ಛಿಕ ಎನ್ನುತ್ತಾರೆ. ಮನಸ್ಸಿಗೆ ಬಂದುದರಿಂದ ಬಳಸಿದ್ದೇವೆ ಎಂಬ ಅರ್ಥ ಬೇಕೆಂದರೆ ಬೇರೆ ಧ್ವನಿ ಸಂಕೇತಗಳನ್ನು ಕೂಡ ಬಳಸಬಹುದು. ಹಳಗನ್ನಡದಲ್ಲಿ ಕ್+ಊ+ಟಿ ಎಂಬ ಧ್ವನಿ ಸಂಕೇತಗಳಿಗೆ ಆಹಾರ (ಅನ್ನ) ಎಂಬ ಅರ್ಥವನ್ನು ಕೊಡಲಾಗಿತ್ತು. ಸಂಸ್ಕೃತದ ಅ+ನ್+ನ್+ಅ ಎಂಬ ಧ್ವನಿ ಸಂಕೇತಗಳನ್ನು ಒಪ್ಪಿಕೊಂಡದ್ದರಿಂದ ಕೂ=ಟ್ ಎಂಬುದು ಮರೆಯಾಗಿ ಅನ್ನ ಎಂಬುದು ಉಳಿಯಿತು. ಇದನ್ನು ಯಾದೃಚ್ಛಿಕ ಎಂದು ಕರೆಯುವುದು ಈ ಕಾರಣದಿಂದ. ಒಂದು ಪಕ್ಷ ದೇವರು ಭಾಷೆಯನ್ನು ಸೃಷ್ಟಿಸಿ ಸ್ಥಿರ ಮಾಡಿ ಬಿಟ್ಟಿದ್ದರೆ ಯಾರೂ ಬದಲಾಯಿಸಲು ಸಾಧ್ಯವಾಗುತ್ತಿರಲಿಲ್ಲ. ಯಾದೃಚ್ಛಿಕ =ಇಷ್ಟ ಬಂದಂತೆ. ಈ ಎಲ್ಲ ಅಂಶಗಳನ್ನು ಸೇರಿಸಿ 'ಯಾದೃಚ್ಛಿಕ ಉಚ್ಚರಿತ ಧ್ವನಿ ಸಂಕೇತಗಳ ಸುವ್ಯವಸ್ಥೆಯ ಲಕ್ಷಣವೇ ಭಾಷೆ' ಎಂದು ಒಪ್ಪಿಕೊಳ್ಳಲಾಗಿದೆ.

## 1.3 ಸ್ವರೂಪ, ಲಕ್ಷಣಗಳ ಸಂಕ್ಷಿಪ್ತ ವಿವರ

ಭಾಷೆ ಎಂದರೇನು? ಎಂಬುದನ್ನು ನೋಡಿದ್ದೇವೆ. ಈಗ ಅದರ ಸ್ವರೂಪ ಎಂಥದ್ದು, ಲಕ್ಷಣಗಳು ಯಾವುವು ಎಂಬುದನ್ನು ತಿಳಿಯೋಣ. ಭಾಷೆಯ ಸ್ವರೂಪವನ್ನು ಕುರಿತು ಭಾಷಾ ವಿಜ್ಞಾನಿಗಳು ಕೆಲವು ತತ್ವಗಳನ್ನು ನಿರೂಪಿಸಿದ್ದಾರೆ. ಭಾಷೆಯ ಬಗ್ಗೆ ಇದುವರೆಗೆ ಚರ್ಚಿಸಿದ ಪ್ರಕಾರ ಅದು ಧ್ವನಿ ಸಂಕೇತಗಳ ವ್ಯವಸ್ಥೆ ಎನ್ನುವುದು ಸ್ಪಷ್ಟವಾಯಿತು. ಭಾಷೆಯು ದೇವರಿಂದ ಮನುಷ್ಯರಿಗೆ ಕೊಡಲ್ಪಟ್ಟದ್ದು ಎಂಬ ಅಭಿಪ್ರಾಯವನ್ನು ಹೊಂದಿರುವವರು ಸುಲಭವಾಗಿ ತಮ್ಮ ನಂಬಿಕೆಯನ್ನು ಬಿಟ್ಟುಕೊಟ್ಟಿರಲಿಲ್ಲ. ಹದಿನೆಂಟನೆಯ ಶತಮಾನದಿಂದೀಚೆಗೆ ಇಂತಹ ನಂಬಿಕೆಯನ್ನು ಪೂರ್ಣವಾಗಿ ತಿರಸ್ಕರಿಸಲು ಸಾಧ್ಯವಾಯಿತು. ಮನುಷ್ಯನ ಧ್ವನ್ಯಂಗಗಳಿಂದ ಉತ್ಪನ್ನವಾದ ಭಾಷೆಯು ಲೌಕಿಕವಾದ ವಿಷಯವೆಂದು ಅವರು ತಿಳಿಸಿದರು.

ಮನುಷ್ಯನಲ್ಲಿ ಕೆಲವು ವಿಶೇಷವಾದ ಶಕ್ತಿಗಳಿವೆ. ಅಂಥ ಶಕ್ತಿಗಳಲ್ಲಿ ಭಾಷೆಯನ್ನು ಕಲಿಯುವ ಶಕ್ತಿಯೂ ಕೂಡ ಒಂದು. ಪ್ರಾಣಿಗಳಿಗೆ ಭಾಷೆ ಎಂಬುದೇ ಇಲ್ಲ ಎಂದು ಹೇಳಲಾಗದು. ಅವುಗಳೂ ಕೂಡ ಧ್ವನ್ಯಂಗಗಳನ್ನು ಹೊಂದಿವೆ. ಅವುಗಳದೇ ಆದ ಸಂಕೇತಾತ್ಮಕವಾದ ಭಾಷೆಯೊಂದಿದೆ. ಅದು ಮನುಷ್ಯರ ಭಾಷೆಯಂತೆ ಇಲ್ಲ ಅಷ್ಟೆ. ಪ್ರಾಣಿಗಳ ಭಾಷೆಯು ಪ್ರಾಣಿಗಳಿಗೆ, ಪಕ್ಷಿಗಳ ಭಾಷೆಯು ಪಕ್ಷಿಗಳಿಗೆ ಸೀಮಿತವಾಗಿ ಇರುತ್ತದೆ. ಮನುಷ್ಯನ ಭಾಷೆಯಲ್ಲಿ ಇರುವಷ್ಟು ಧ್ವನಿಗಳು ಪಕ್ಷಿ ಪ್ರಾಣಿಗಳ ಭಾಷೆಯಲ್ಲಿ ಇರಲು ಸಾಧ್ಯವಿಲ್ಲ.

ಮನುಷ್ಯನ ದೃಷ್ಟಿಯಿಂದ ನೋಡಿದರೆ ಭಾಷೆಯು ಒಂದು ಸಾಮಾಜಿಕ ಕ್ರಿಯೆಯಾಗಿದೆ. ಒಂದೊಂದು ಜನಾಂಗವೂ ತಮ್ಮದೇ ಆದ ಭಾಷೆಯನ್ನು ಹೊಂದಿರುತ್ತವೆ. ಆದ್ದರಿಂದ ಭಾಷೆಯು

ಅಳಿವು ಉಳಿವುಗಳು ಆಯಾ ಜನಾಂಗವನ್ನು ಅಥವಾ ಭಾಷಿಗರನ್ನು ಅವಲಂಬಿಸಿವೆ. ಒಂದು ಭಾಷೆಯನ್ನಾಡುವ ಜನತೆ ಮಹತ್ಸಾಧನೆಗಳನ್ನು ಮಾಡಿದರೆ ಅವರ ಭಾಷೆಗೂ ಮಹತ್ವ ಪ್ರಾಪ್ತವಾಗುತ್ತದೆ. ಮನುಷ್ಯ ಭಾಷೆಯನ್ನು ಸಂಸ್ಕೃತಿಯ ವಾಹಕವನ್ನಾಗಿ ಬಳಸುವುದರಿಂದ ಭಾಷೆಯು ಸಾಂಸ್ಕೃತಿಕವಾಗಿ ಬೆಳೆಯುತ್ತದೆ.

ಒಂದು ಜನ ಸಮೂಹ ಒಂದು ನಿರ್ದಿಷ್ಟ ಭಾಷೆಯನ್ನು ಆಡುತ್ತಾರೆಂದು ಹೇಳಿದಾಗ ಅದು ಅದರ ಸ್ವಂತ ಆಸ್ತಿಯಾಗುತ್ತದೆಯೆ? ಇದು ನಿಜಕ್ಕೂ ಒಳ್ಳೆಯ ಪ್ರಶ್ನೆ ಅಲ್ಲವೆ? ಮಾನವ ಶಿಶು ಹುಟ್ಟುವಾಗಲೇ ಕೆಲವೊಂದು ಆನುವಂಶಿಕ ಲಕ್ಷಣ, ಸ್ವರೂಪಗಳನ್ನು ಪಡೆದುಕೊಂಡಿರುತ್ತದೆ. ಅದನ್ನು ಬದಲಾಯಿಸಲು ಸಾಧ್ಯವಿಲ್ಲ. ಆದರೆ ಭಾಷೆಯು ಆನುವಂಶಿಕವಾಗಿ ಲಭಿಸುವ ಆಸ್ತಿಯಲ್ಲ. ಹುಟ್ಟಿದ ಶಿಶುವಿಗೆ ಯಾವ ಭಾಷೆಯೂ ಬರುವುದಿಲ್ಲ. ಭಾಷೆಯು ಅದರ ಜೀನ್ಸ್‌ಗಳಲ್ಲಿ ಇರುವುದಿಲ್ಲ. ಅಂದರೆ ಶಿಶುವು ಎಲ್ಲಿ ಯಾವ ಪರಿಸರದಲ್ಲಿ ಬೆಳೆಯುತ್ತದೆಯೋ ಆ ಪರಿಸರದ ಎಲ್ಲ ಅಂಶಗಳನ್ನೂ ತಾನೂ ಪಡೆದುಕೊಳ್ಳುತ್ತದೆ. ಆ ಪರಿಸರವು ತುಂಬಾ ಸುಸಂಸ್ಕೃತವಾದುದಾಗಿದ್ದರೆ ಶಿಶುವೂ ಸುಸಂಸ್ಕೃತ ಜೀವಿಯಾಗಿ ಬೆಳೆಯುತ್ತದೆ. ಶಿಶುವೇನಾದರೂ ಮೂಗರ ಪರಿಸರದಲ್ಲೇ ಇದ್ದರೆ ತಾನೂ ಮೂಗನಾಗುತ್ತದೆ. ಅದು ಯಾವ ಭಾಷೆಯನ್ನಾಡುವವರ ನಡುವೆ ಬೆಳೆಯುತ್ತದೆಯೋ ಅದೇ ಭಾಷೆಯನ್ನು ಕಲಿಯುತ್ತದೆ. ಒಂದು ಪಕ್ಷ ಶಿಶು ಬೆಳೆಯುವ ಪರಿಸರದಲ್ಲಿ ಎರಡು ಮೂರು ಭಾಷೆಗಳನ್ನು ಆಡುತ್ತಿದ್ದರೆ ಮಗು ಕೂಡ ಎರಡು ಮೂರು ಭಾಷೆಗಳನ್ನು ಸರಾಗವಾಗಿ ಕಲಿಯುತ್ತದೆ. ಭಾಷೆಯು ನಿರಂತರ ಪರಿವರ್ತನಾಶೀಲವಾದುದು. ಭಾಷೆಯನ್ನು ಸಾಮಾನ್ಯವಾಗಿ ಹರಿಯುವ ಹೊಳೆಗೆ ಹೋಲಿಸುತ್ತಾರೆ. ಅಂಥ ಜೀವನದಿಯು ಕಾಲದಿಂದ ಕಾಲಕ್ಕೆ ವ್ಯಕ್ತಿಯಿಂದ ವ್ಯಕ್ತಿಗೆ ಸ್ಥಳದಿಂದ ಸ್ಥಳಕ್ಕೆ ಬದಲಾವಣೆ ಹೊಂದುತ್ತದೆ. ಇದು ಯಾವುದೇ ಭಾಷೆಯ ಬೆಳವಣಿಗೆಗೆ ಬಹಳ ಮುಖ್ಯವಾದುದು. ಇಂಥ ಒಂದು ಲಕ್ಷಣವಿಲ್ಲದೆ ಇದಿದ್ದರೆ ಈಗ ಇರುವಷ್ಟು ಭಾಷೆಗಳು ಮತ್ತು ಉಪಭಾಷೆಗಳು ಜಗತ್ತಿನಲ್ಲಿ ಇರುತ್ತಿರಲಿಲ್ಲ. ಭಾಷೆಯ ಪರಿವರ್ತನೆಗೆ ಹಲವು ಕಾರಣಗಳಿರುತ್ತವೆ. ಕೆಲವು ಭಾಷೆಗೇ ಸಂಬಂಧಿಸಿರುತ್ತವೆ. ಇನ್ನು ಕೆಲವು ಇತರ ಕಾರಣಗಳಿರುತ್ತವೆ. ಒಬ್ಬ ವ್ಯಕ್ತಿಯು ಮಾತ್ರವೇ ಪರಿವರ್ತನೆಗೆ ಕಾರಣ ಅಗುವುದಿಲ್ಲ. ಒಂದು ಯಂತ್ರವಾದರೆ ಅದು ಒಬ್ಬನ ಅವಿಷ್ಕಾರ ಆಗಿರುತ್ತದೆ. ಅದನ್ನು ಬದಲಾಯಿಸುವ, ಉತ್ತಮ ಪಡಿಸುವ ಅವಕಾಶವೂ ಆತನಿಗೇ ಇರುತ್ತದೆ. ಆದರೆ ಭಾಷೆಯ ವಿಷಯದಲ್ಲಿ ಹಾಗೆ ಹೇಳುವಂತಿಲ್ಲ. ಅವನ ಸುತ್ತಲಿನ ವಾತಾವರಣ ಪರಿವರ್ತನೆಗೆ ಕಾರಣವಾಗಿರುತ್ತದೆ. ವ್ಯಕ್ತಿ, ಸಮಾಜ, ಸಂಪ್ರದಾಯ, ಸಂಸ್ಕೃತಿ ಮುಂತಾದ ಅನೇಕ ಕಾರಣಗಳಿರುತ್ತವೆ. ಈ ಎಲ್ಲ ಕಾರಣಗಳಿಂದಲೂ ಭಾಷೆಯು ಬದಲಾವಣೆಗಳನ್ನು ಮೈಗೂಡಿಸಿಕೊಳ್ಳುತ್ತದೆ. ಕೆಲವು ಪ್ರಾಚೀನ ಭಾಷೆಗಳನ್ನು ಮೃತ ಭಾಷೆಗಳೆಂದು ಕರೆಯುತ್ತಾರೆ. ಮೃತ ಭಾಷೆಗಳೆಂದರೆ ಅವುಗಳು ಸತ್ತು ಶೂನ್ಯವಾಗಿ ಹೋಗಿವೆ ಎಂದು ಭಾವಿಸಬಾರದು. ಅವುಗಳು ದಿನ ಬಳಕೆಯ ವ್ಯವಹಾರಕ್ಕೆ ಒಗ್ಗದಿರುವ ಕಾರಣದಿಂದ ಅವುಗಳನ್ನು ಆಡು ಭಾಷೆಯಾಗಿ ತೆಗೆದುಕೊಂಡು ಇರುವುದಿಲ್ಲ. ಮೃತಭಾಷೆಗಳು ಸಮೃದ್ಧ ಭಾಷೆಗಳಾಗಿರಬಹುದು, ಜ್ಞಾನ ಭಂಡಾರವೇ ತುಂಬಿರಬಹುದು. ಆದರೂ ಅವುಗಳು ಅಧ್ಯಯನ ಯೋಗ್ಯವಾಗಿ ಇರುತ್ತವಲ್ಲದೆ ಆಡು ಭಾಷೆಯಾಗಿ ಇರುವುದಿಲ್ಲ.

ಒಂದು ಭಾಷೆ ಇನ್ನೊಂದು ಭಾಷೆಯಿಂದ ಧ್ವನಿಯನ್ನೋ, ಶಬ್ದವನ್ನೋ ಸ್ವೀಕರಿಸಿದರೆ ಭಾಷೆಯಲ್ಲಿ ಬದಲಾವಣೆ ಉಂಟಾಗುತ್ತದೆ. ಇದನ್ನು ತಿಳಿಯಲು ಲಿಪಿಯುಳ್ಳ ಯಾವ ಭಾಷೆಯನ್ನಾದರೂ ಅರಿಸಿಕೊಂಡು ನೋಡಬಹುದು. ಒಂದು ರಾಜ್ಯದ ಗಡಿ ಪ್ರದೇಶಗಳಲ್ಲಿ ಭಾಷೆಯಲ್ಲಾಗಿರುವ

ವ್ಯತ್ಯಾಸಗಳನ್ನು ಗಮನಿಸಬಹುದು. ಶತಮಾನಗಳ ಅಂತರದಲ್ಲಿ ಆಗಿರುವ ಬದಲಾವಣೆಯನ್ನು ನೋಡಬಹುದು. ಭಾಷೆ ಅಭಿವ್ಯಕ್ತಿ ಮಾಧ್ಯಮವಾದುದರಿಂದ ರಾಜಕೀಯ, ಸಾಂಸ್ಕೃತಿಕ, ಧಾರ್ಮಿಕ ಕಾರಣಗಳಿಂದಲೂ ಭಾಷೆಯಲ್ಲಿ ಬದಲಾವಣೆಗಳಾಗುತ್ತವೆ. ಇದಕ್ಕೆ ಅನ್ಯ ಭಾಷೆಗಳು ಕಾರಣವಾದರೆ ಬಾಹ್ಯ ಕಾರಣ ಎಂದು ಕರೆಯುತ್ತಾರೆ. ಉಚ್ಚಾರಣೆಯ ಸೌಲಭ್ಯಕ್ಕಾಗಿ ಧ್ವನಿಗಳನ್ನು ಕೈಬಿಡುವುದು ಅಥವಾ ಮಾನಸಿಕ ಕಾರಣಗಳಿಗಾಗಿ ಹೊಸ ರೂಪಗಳನ್ನು ಹುಟ್ಟುಹಾಕುವುದು ಇವು ಆಂತರಿಕ ಕಾರಣಗಳಾಗುತ್ತವೆ. ಕೆಲವು ಬಾಹ್ಯ ಕಾರಣಗಳು ಮತ್ತೆ ಕೆಲವು ಆಂತರಿಕ ಕಾರಣಗಳು ಎಂದರೂ ಅವುಗಳು ಪೂರ್ಣವಾಗಿ ಪ್ರತ್ಯೇಕವಾದುವಲ್ಲ. ಒಂದಕ್ಕೊಂದು ಪೋಷಕವಾಗಿ ಪೂರಕವಾಗಿ ಇರುತ್ತವೆ ಎನ್ನುವುದು ಗಮನಾರ್ಹವಾದ ಅಂಶವಾಗಿದೆ. ಭಾಷೆಯ ಪರಿವರ್ತನೆಯು ಹೆಚ್ಚಾಗಿ ನಡೆಯುವುದು ಶಬ್ದದ ಧ್ವನಿ ವ್ಯವಸ್ಥೆ ಮತ್ತು ಅರ್ಥದ ಮೇಲೆ. ಅನೇಕ ಕಾರಣಗಳಿಂದ ಪದಗಳ ಸ್ವೀಕಾರವು ನಡೆಯುತ್ತಲೇ ಇರುತ್ತದೆ. ಇದರಿಂದ ಭಾಷೆಯ ವ್ಯಾಕರಣ ವ್ಯವಸ್ಥೆಯ ಮೇಲೆಯೂ ಪರಿಣಾಮ ಉಂಟಾಗುತ್ತದೆ. ಭಾಷಾ ಪರಿವರ್ತನೆಯ ಕಾರಣಗಳನ್ನು ನಾವು ಪಟ್ಟಿ ಮಾಡಬಹುದು. (ಎ). ಧ್ವನಿ ಬದಲಾವಣೆ (ಬಿ). ಸ್ವೀಕರಣ ಕಾರ್ಯ (ಸಿ). ಹೋಲಿಕೆಯ ವಿಧಾನ. ಇವುಗಳು ಭಾಷೆಯ ಎಲ್ಲಾ ವ್ಯವಸ್ಥೆಗಳಲ್ಲಿಯೂ ಬದಲಾವಣೆಯನ್ನು ಉಂಟುಮಾಡುತ್ತವೆ. ಕನ್ನಡದಲ್ಲಿ 'ಪ' ಕಾರವು 'ಹ' ಕಾರವಾಗಿರುವುದು ಮತ್ತು 'ವ' ಕಾರವು 'ಬ' ಕಾರವಾಗಿರುವುದು ಒಂದು ನಿದರ್ಶನವಾಗಿದೆ. ಸಂಸ್ಕೃತದಲ್ಲಿ ಕರ್ಮಣಿ ಪ್ರಯೋಗವು ಸಹಜವಾಗಿ ಕಂಡುಬರುತ್ತದೆ. ಪಕ್ಷಿಯು ಬೇಡನಿಂದ ಕೊಲ್ಲಲ್ಪಟ್ಟಿತು, ರಾವಣನು ರಾಮನಿಂದ ಕೊಲ್ಲಲ್ಪಟ್ಟನು, ಇಲ್ಲಿ ಛಾಪಾ ಕಾಗದಗಳು ಮಾರಲ್ಪಡುತ್ತವೆ ಎಂಬಂತಹ ಪ್ರಯೋಗಗಳು ಸಂಸ್ಕೃತದ ಪ್ರಭಾವದಿಂದ ಕನ್ನಡಕ್ಕೆ ಬಂದುವು. ಸಂಸ್ಕೃತದಲ್ಲಿ ಈ ಪ್ರಯೋಗ ಹಿತವೆನ್ನಿಸುವ ಹಾಗೆ ಕನ್ನಡದಲ್ಲಿ ಹಿತವೆನ್ನಿಸುವುದಿಲ್ಲ. ಸ್ವೀಕರಿಸುವ ಭಾಷೆಯು ಇನ್ನೊಂದು ಭಾಷೆಗಿಂತ ಕೊಂಚ ಕೆಳಮಟ್ಟದ್ದು ಎನ್ನಿಸಿಕೊಂಡಿದ್ದರೆ ವಿವಿಧ ಶೈಲಿಗಳು ಕಾಣಿಸಿಕೊಳ್ಳುತ್ತವೆ. ಕೆಲವು ಸಲ ಒಂದು ರೂಪವನ್ನು ಅನುಸರಿಸಿ ಇನ್ನೊಂದು ರೂಪ ಬದಲಾಗುತ್ತಿದ್ದರೆ ಅದನ್ನು ಸಾದೃಶ್ಯ ರೂಪಾಂತರ ಎನ್ನುತ್ತಾರೆ. ಉದಾ; 'ನಿಂತು' ಎಂಬ ಪದವನ್ನು ನೋಡಿ ಕುಂತು (ಕುಳಿತು) ಎಂಬ ಪದವನ್ನು ಸೃಷ್ಟಿಸುತ್ತೇವೆ. ಕಕ್ಕಿದ, ಸೊಕ್ಕಿದ ಎಂಬುದನ್ನು ನೋಡಿ ನಕ್ಕಿದ ಎಂಬ ರೂಪ ಹುಟ್ಟಿಕೊಂಡಿದೆ. ಕೆತ್ತುವುದು, ಎತ್ತುವುದು ನೋಡಿ ಹೂವನ್ನು ಕಿತ್ತುವುದು (ಕೀಳುವುದು) ಎಂಬ ರೂಪ ಹುಟ್ಟಿದೆ. ಕೆಲವು ಸಲ ಸೌಲಭ್ಯಕ್ಕೋಸ್ಕರ ಪದಗಳ ಉದ್ದವನ್ನು ಮೊಟಕು ಮಾಡುವುದು ಕಂಡು ಬರುತ್ತದೆ. ಉದಾ; ವೀರರಾಜಪೇಟೆ ಎಂಬುದು ಒಂದು 'ರ' ವನ್ನು ಕಳೆದುಕೊಂಡು ವೀರಾಜಪೇಟೆ ಎಂದಾಗುವುದು. ಹೊನ್ನಯ್ಯನಹಳ್ಳಿ ಎಂಬುದು ಹೊನ್ನೇನಳ್ಳಿ ಆಗುವುದು. ಹಿಂದೆ ಕನ್ನಡದ ವಿವಿಧ ಹಂತಗಳಿಗೆ ಸಂಬಂಧಿಸಿದಂತೆ ಗರ್ದೆ > ಗದ್ದೆಯಾಗಿರುವುದು, ಕರ್ಚು > ಕಚ್ಚು ಆಗಿರುವುದು ಇದಕ್ಕೆ ನಿದರ್ಶನವಾಗಿದೆ. ಕೆಲವು ಪರಿವರ್ತನೆಗಳಿಗೆ ಕಾರಣ ಕೊಡುವುದು ಸುಲಭವಲ್ಲ.

ಭಾಷೆಗೆ ತನ್ನದೇ ಆದ ಭೌಗೋಳಿಕ ಹದ್ದು ಬಸ್ತು ಇರುತ್ತದೆ. ಈ ಹದ್ದು ಬಸ್ತು ಮುಖ್ಯವಾಗಿ ಆ ಭಾಷೆಯನ್ನು ಆಡುವ ಜನರನ್ನು ಅವಲಂಬಿಸಿರುತ್ತದೆ. ಕೆಲವು ವೇಳೆ ಒಂದು ಭಾಷಾಕ್ಷೇತ್ರದಲ್ಲಿ ಹಲವು ಭಾಷೆಗಳನ್ನು ಆಡುವ ಜನರು ಇರುತ್ತಾರೆ. ಕರ್ನಾಟಕದಲ್ಲಿ ಕನ್ನಡ, ಕೊಂಕಣಿ, ತುಳು, ಕೊಡಗು, ಬಡಗ, ಹವ್ಯಕ, ಸೋಲಿಗ ಮುಂತಾದ ಭಾಷೆಗಳನ್ನು ಆಡುತ್ತಾರೆ. ಇವುಗಳ ಜೊತೆಗೆ ಉಪಭಾಷೆಗಳನ್ನು ಆಡುವವರೂ ಇದ್ದಾರೆ. ಆದರೆ ಹೆಚ್ಚು ಜನರ ಭಾಷೆಯು ಕನ್ನಡವಾದುದರಿಂದ ಕರ್ನಾಟಕವನ್ನು ಕನ್ನಡ ಭಾಷೆಯ ನಿರ್ದಿಷ್ಟ ಕ್ಷೇತ್ರ ಎಂದು ಕರೆಯಬಹುದು. ಭಾಷಾವಾರು ರಾಜ್ಯ ರಚನೆಗೆ ಇದೇ ಕಾರಣವಾಗಿದೆ.

ಇತರ ಭಾಷೆಗಳನ್ನಾಡುವವರೂ ಕನ್ನಡದಲ್ಲಿ ವ್ಯವಹರಿಸುತ್ತಾರೆ ಎಂದು ನಿರೀಕ್ಷಿಸಲಾಗುತ್ತದೆ. ಇದು ಏರುಪೇರು ಆಗುವ ಪರಿಸ್ಥಿತಿಯೂ ನಿರ್ಮಾಣವಾಗಬಹುದು. ವಿಶಾಲವಾದ ಭಾಷಾಕ್ಷೇತ್ರಗಳು ಚಿಕ್ಕದಾಗಬಹುದು. ಭಾಷಾಕ್ಷೇತ್ರವನ್ನು ನಿರ್ಧಾರ ಮಾಡುವುದು ಕಷ್ಟದಾಯಕವಾದುದು. ಒಂದು ಭಾಷೆಯ ಗಡಿಯು ಎಲ್ಲಿ ಮುಗಿದು ಇನ್ನೊಂದು ಭಾಷೆಯ ಎಲ್ಲೆಯು ಎಲ್ಲಿ ಪ್ರಾರಂಭವಾಗುತ್ತದೆ ಎಂದು ಖಚಿತವಾಗಿ ಹೇಳುವುದು ಕಷ್ಟವೇ ಆಗುತ್ತದೆ. ಒಂದು ಅಂದಾಜು ನಿರ್ಧಾರವನ್ನು ತೆಗೆದುಕೊಳ್ಳದೆ ವಿಧಿಯೇ ಇಲ್ಲ. ಇದರಿಂದಲೇ ಗಡಿ ವಿವಾದಗಳು ಸೃಷ್ಟಿಯಾಗಿ ಬಿಡುತ್ತವೆ.

ಭಾಷೆ ಎಂಬುದು ಒಂದು ಧ್ವನಿ ಪ್ರಪಂಚ. ಪ್ರತಿಯೊಂದು ಭಾಷೆಗೂ ತನ್ನದೇ ಆದ ಖಚಿತವಾದ ಧ್ವನಿ ವ್ಯವಸ್ಥೆ ಇರುತ್ತದೆ. ಮನುಷ್ಯನ ಧ್ವನ್ಯಂಗಗಳ ನಿರ್ಮಾಣ ಅದ್ಭುತವಾದುದು. ಅವನು ಅಸಂಖ್ಯ ಧ್ವನಿಗಳನ್ನು ಹೊರಡಿಸಬಲ್ಲನು. ಆದರೆ ಅವನು ಮಾಡಿದ ಸದ್ದೆಲ್ಲವೂ ಭಾಷೆಯ ಧ್ವನಿಗಳಾಗುವುದಿಲ್ಲ. ಭಾಷೆಯಲ್ಲಿ ವ್ಯವಸ್ಥಿತ ಧ್ವನಿ ಸಮೂಹ ಇರುತ್ತದೆ. ಈ ಧ್ವನಿಗಳಿಂದ ಪದ ಹಾಗೂ ವಾಕ್ಯಗಳು ನಿರ್ಮಾಣವಾಗುತ್ತವೆ. ಹಾಗಾಗಿ ಮಾನವ ಸಂಪರ್ಕ ಸುಲಭವಾಗುತ್ತದೆ. ಕ್, ಖ್, ರ್, ಸ್ ಮುಂತಾದ ಧ್ವನಿಗಳು ವ್ಯವಸ್ಥಿತವಾಗಿ ಸೇರಿದರೆ ಮಾತ್ರ ಭಾಷೆ ಎನ್ನಿಸಿಕೊಳ್ಳುತ್ತದೆ. ಈ ನಾಲ್ಕು ಧ್ವನಿಗಳ ಜೊತೆಗೆ ಬೇರೆ ಧ್ವನಿಗಳು ಸೇರದೆ, ಸ್ವರಧ್ವನಿಗಳು ಸೇರದಿದ್ದರೆ ಭಾಷೆ ಅರ್ಥಪೂರ್ಣ ಆಗುವುದಿಲ್ಲ.

ಭಾಷೆಯ ಧ್ವನಿಗಳು ವಿಶೇಷವಾದ ಮೌಲ್ಯಗಳನ್ನು ಒಳಗೊಳ್ಳುವಂತೆ ಮಾಡುವುದು ಒಳ್ಳೆಯದು. ಇದು ಅತ್ಯಗತ್ಯವೂ ಆಗಿದೆ. ಅನುಕರಣೆಯಿಂದ ಭಾಷೆಯನ್ನು ಕಲಿತ ಮನುಷ್ಯನು ಕವಿಯಾದಾಗ, ವಾಗ್ಮಿಯಾದಾಗ ಭಾಷೆಗೆ ಶಕ್ತಿಯನ್ನು ತುಂಬುತ್ತಾನೆ. ಹೀಗೆ ತುಂಬಿದ ಶಕ್ತಿಯನ್ನು ಹೊರುವ ಸಾಮರ್ಥ್ಯವನ್ನು ಭಾಷೆಯು ರೂಢಿಸಿಕೊಂಡಂತೆ ಅದರ ಅಂತಸ್ತು ಹೆಚ್ಚುತ್ತದೆ. ಭಾಷೆಯ ಬೆಳವಣಿಗೆಯನ್ನು ಗಮನಿಸಿದರೆ ಒಂದು ಆಶ್ಚರ್ಯಕರವಾದ ಅಂಶ ಕಂಡುಬರುತ್ತದೆ. ಮನುಷ್ಯ ಒರಟನಾಗಿದ್ದಾಗ ಭಾಷೆಯೂ ಒರಟಾಗಿತ್ತು. ಅವನು ಸೂಕ್ಷ್ಮವಾದಾಗ ಭಾಷೆಯೂ ಸೂಕ್ಷ್ಮವಾಗುತ್ತದೆ. ಆಧುನಿಕ ವ್ಯಕ್ತಿಯು ಒರಟು ಭಾಷೆಯನ್ನು ಬಳಸಿದರೆ ಮನುಷ್ಯನೇ ಒರಟು ಎಂಬ ಕಲ್ಪನೆ ಮೂಡುತ್ತದೆ. ಭಾಷೆಯು ಸಾಂಸ್ಕೃತಿಕವಾಗಿ ಬೆಳೆದು ಅಂಥ ಕಲ್ಪನೆಗೆ ಕಾರಣವಾಗುತ್ತದೆ. ಲಿಪಿವಂತ ಭಾಷೆಯು ಸಾಹಿತ್ಯವನ್ನು ಹೊಂದಿರುತ್ತದೆ. ಬೆಳೆಯುತ್ತಿರುವ ಭಾಷೆಯ ಧ್ವನಿ ಮೌಲ್ಯ ದಿನೇ ದಿನೇ ಹೆಚ್ಚುತ್ತಾ ಹೋಗುತ್ತದೆ. ಹಾಗೆ ಆದಂತೆಲ್ಲ ಅಭಿವ್ಯಕ್ತಿಯೂ ಸ್ಪಷ್ಟತೆಯನ್ನು ಪಡೆದುಕೊಳ್ಳುತ್ತದೆ. ಸಾಹಿತ್ಯವು ಬೆಳೆದಂತೆಲ್ಲ ಭಾಷೆಯು ಪ್ರೌಢವಾಗುತ್ತದೆ, ಪ್ರಬುದ್ಧವಾಗುತ್ತದೆ. ಅದು ಮಾತಿನಲ್ಲಿಯೂ ಪ್ರೌಢಿಮೆ ಇದ್ದೇ ಇರುತ್ತದೆ. ಒಟ್ಟಾರೆ ಭಾಷೆಯು ಒರಟುತನ ಮತ್ತು ಅಪ್ರಬುದ್ಧತೆಯ ಕಡೆಯಿಂದ ಸೂಕ್ಷ್ಮತೆ ಹಾಗೂ ಪ್ರಬುದ್ಧತೆಯ ಕಡೆ ಸಾಗುತ್ತದೆ. ಭಾಷೆಯ ಜೀವಂತಿಕೆಯ ಲಕ್ಷಣವೆ ಅದು. ಇದರಿಂದಾಗಿ ಕಾಲವು ಕಳೆದಂತೆಲ್ಲ ಶಬ್ದ ಭಂಡಾರ ಶ್ರೀಮಂತವಾಗುತ್ತದೆ, ಹೊಸ ಧ್ವನಿ ಸಂಕೇತಗಳು ಸೃಷ್ಟಿಯಾಗುತ್ತವೆ. (ನಮ್ಮಲ್ಲಿ ಪ, ಫ ಧ್ವನಿಗಳು ಇಂಗ್ಲಿಷಿನ P,Ph ಗಳಿಗೆ ಸಮವಾಗಿವೆ. ಆದರೆ ಇಂಗ್ಲಿಷಿನ F ಎಂಬುದು ಬಂದಾಗ ಫ಼ ಎಂಬ ನವೀನ ಧ್ವನಿಯೊಂದನ್ನು ಸೃಷ್ಟಿಸಬೇಕಾಯಿತು.)

ಪರಿವರ್ತನೆಯ ಹಾದಿ ಎಂದಿಗೂ ಕೊನೆಗೊಳ್ಳುವುದಿಲ್ಲ. ಮನುಷ್ಯನು ದಿನೇ ದಿನೇ ಒಳ್ಳೆಯ ಮತ್ತು ಕೆಟ್ಟ ಎರಡೂ ದಿಕ್ಕುಗಳಲ್ಲಿ ಬೆಳೆಯುತ್ತಿದ್ದಾನಷ್ಟೆ. ಅಂದರೆ ಅವನ ಬೆಳವಣಿಗೆಯು ನಿಂತಿಲ್ಲ ಅಲ್ಲವೆ? ಹಾಗೆಯೇ ಮನುಷ್ಯನ ಒಂದು ಉಪಕರಣವಾದ ಭಾಷೆಯು ಹೇಗೆ ತಾನೆ ಇದ್ದ ಹಾಗೇ

ಉಳಿಯುತ್ತದೆ?.ಅನೇಕ ಉಪಭಾಷೆಗಳೂ ಕೂಡ ಹುಟ್ಟಿಕೊಂಡಿರುವುದನ್ನು ಕಾಣಬಹುದು. ಉಪಭಾಷೆಗಳು ಪ್ರತ್ಯೇಕ ಭಾಷೆಗಳಾಗುವುದೂ ಕೂಡ ಸಾಧ್ಯವಾಗುತ್ತದೆ. ಆದ್ದರಿಂದಲೇ ಭಾಷೆಯ' ಬೆಳವಣಿಗೆ ಎಂದಿಗೂ ನಿಲ್ಲುವುದಿಲ್ಲ ಎನ್ನಲಾಗಿದೆ. ಭಾಷೆಯು ಕಲಿಯುವವರ ಸ್ವತ್ತು ಎಂದರೆ ತಪ್ಪಲ್ಲ. ಒಂದೊಂದು ಹೆಚ್ಚುವರಿ ಭಾಷೆಯನ್ನು ಕಲಿತಂತೆಲ್ಲಾ ವ್ಯಕ್ತಿಯ ಶಕ್ತಿಯೂ ಹೆಚ್ಚುತ್ತದೆ. ಏಕೆಂದರೆ ಭಾಷೆಯು ಒಂದು ಪ್ರಬಲ ಉಪಕರಣವಿದ್ದ ಹಾಗೆ ಆದ್ದರಿಂದ ಮಾತೃ ಭಾಷೆ ಎಂದು ಹೇಳಿದರೆ ತಾಯಿಯಿಂದ ಮಗುವಿಗೆ ವಂಶವಾಹಿಗಳ ಮೂಲಕ ತಾನೇ ತಾನಾಗಿ ಬರುವ ಭಾಷೆ ಎಂದು ತಿಳಿಯಬಾರದು. ಮಾತೃಭಾಷೆ ಎಂದರೆ ಮನೆಯಲ್ಲಿ ಸದಸ್ಯರು ಆಡುವ ಭಾಷೆ ಎಂದು ಅರ್ಥ. ಮನೆಯ ಭಾಷೆ ಒಂದು, ಪರಿಸರದ ಭಾಷೆ ಇನ್ನೊಂದು, ಶಿಕ್ಷಣದ ಮಾಧ್ಯಮ ಮತ್ತೊಂದು ಆಗಿರುವ ಸಾಧ್ಯತೆಯು ನಮ್ಮ ಕಣ್ಮುಂದೆ ಕಾಣುತ್ತಿದೆ. ಶಿಕ್ಷಣ ತಜ್ಞರ ಪ್ರಕಾರ ಈ ಮೂರು ಕ್ಷೇತ್ರಗಳಲ್ಲಿ ಒಂದೇ ಭಾಷೆ ಇರುವುದಾದರೆ ಮಗುವಿನ ಪ್ರಗತಿ ಅದ್ಭುತವಾಗಿರುತ್ತದೆ ಎನ್ನುತ್ತಾರೆ.

ಪರಿಸರದ ಭಾಷೆಯನ್ನು ಮಗು ಬೇಗ ಕಲಿಯುತ್ತದೆ ಎಂದು ಹೇಳಿದಾಗ ಹೇಗೆ ಕಲಿಯುತ್ತದೆ ಎಂಬ ವಿಷಯವನ್ನೂ ತಿಳಿದುಕೊಳ್ಳಬೇಕು. ಮಾನವ ಶಿಶು ತನ್ನ ಸುತ್ತಲೂ ಇರುವ ದೊಡ್ಡವರು ಮಾತನಾಡುವುದನ್ನು ಬಹಳ ಚುರುಕಾಗಿ ಗಮನಿಸುತ್ತಿರುತ್ತದೆ. ಅವರ ಮಾತನ್ನು ಕೇಳಿಸಿಕೊಂಡು ತಾನು ಹಾಗೆಯೇ ಉಚ್ಚರಿಸಲು ಯತ್ನಿಸುತ್ತದೆ, ಧ್ವನಿಗಳನ್ನು ಹೊರಡಿಸುತ್ತದೆ. ನಿಧಾನವಾಗಿ ಶಬ್ದಗಳನ್ನು ಗ್ರಹಿಸುತ್ತದೆ, ಉಚ್ಚರಿಸಲು ಪ್ರಯತ್ನಿಸುತ್ತದೆ. ಇದೇ ಅನುಕರಣೆ. ಅನುಕರಣೆಯು ಮನುಷ್ಯನಿಗೆ ಮಾತ್ರವಲ್ಲ ಸಕಲ ಜೀವರಾಶಿಗಳಿಗೂ ಸಹಜವಾಗಿಯೇ ಇರುವ ಮೂಲಪ್ರವೃತ್ತಿ. ಭಾಷೆಯನ್ನು ಅನುಕರಣೆಯಿಂದ ಮನುಷ್ಯ ಕಲಿಯುತ್ತಾನೆ ಎಂದು ಎಲ್ಲರೂ ಒಪ್ಪಲೇ ಬೇಕು.

ಭಾಷೆಯು ಅನುಕರಣೆಯಿಂದ ಬರುತ್ತದೆಂಬುದು ನಿಜವಾದರೂ ಅದನ್ನು ರೂಢಿಸಿಕೊಳ್ಳದಿದ್ದರೆ ದೀರ್ಘಕಾಲದ ನಂತರ ಮರೆತೂ ಹೋಗಬಹುದು. ಎಷ್ಟೋ ಜನರು ಅನ್ಯಭಾಷಾ ಪರಿಸರದಲ್ಲಿ ದಶಕಗಳ ಕಾಲ ವಾಸಿಸುತ್ತಿದ್ದು ಎಂದೋ ಒಂದು ದಿನ ಮಾತೃಭಾಷೆಯಲ್ಲಿ ಮಾತನಾಡಲು ಯತ್ನಿಸಿದಾಗ ತೊದಲುವ ಸಂಭವ ಹೆಚ್ಚು, ಭಾಷೆಯು ನಿಂತ ನೀರಲ್ಲ ಎಂದು ಹೇಳಲಾಗುತ್ತದೆ. ಅದು ತನ್ನೊಳಗೆ ತಾನು ಬದಲಾಗುತ್ತಾ ಹೋಗುತ್ತದೆ, ಹೊಸ ಹೊಸ ಶಬ್ದಗಳನ್ನು ಸ್ವೀಕರಿಸುತ್ತದೆ, ಹೊಸತನವನ್ನು ಪಡೆದುಕೊಳ್ಳುತ್ತದೆ. ಆದರೆ ಪರಿವರ್ತನೆಯು ಒಂದೇ ಕಾಲಮಿತಿಯಲ್ಲಿ ಆಗುವುದಿಲ್ಲ. ಅದು ದೀರ್ಘಕಾಲಿಕವಾದ ಕ್ರಿಯೆಯಾಗಿದೆ.

ಭಾಷೆಯು ತನ್ನದೇ ಆದ ಚರಿತ್ರೆಯನ್ನು ಹೊಂದಿರುತ್ತದೆ. ಒಂದು ಭಾಷೆಯ ಉಗಮ, ವಿಕಾಸಗಳನ್ನು ನಿರ್ದಿಷ್ಟವಾದ ಕಾಲಘಟ್ಟಗಳಲ್ಲಿ ಗುರುತಿಸುವುದು ಸುಲಭವಲ್ಲ. ಇದಕ್ಕೆ ಆಧಾರಗಳ ಕೊರತೆಯು ಕಾರಣವಾಗಿರುತ್ತದೆ. ಬರಹ ರೂಪದ ದಾಖಲೆಗಳು ಶಾಸನಗಳು ಕಾವ್ಯಗಳು ಮುಂತಾದವು ಭಾಷೆಯ ಇತಿಹಾಸವನ್ನು ಬರೆಯಲು ಅಗತ್ಯವಾಗಿವೆ. ಒಂದು ಭಾಷೆಯನ್ನು ಆಡುವವರ ಕ್ಷೇತ್ರವು ವಿಸ್ತಾರವಾಗಬಹುದು ಅಥವಾ ಚಿಕ್ಕದಾಗಬಹುದು. ಕಾವೇರಿಯಿಂದ ಗೋದಾವರಿವರೆಗೆ ಇದ್ದ ನಾಡು ಕನ್ನಡ ನಾಡು ಎಂಬ ವಿಷಯವನ್ನು ಓದುತ್ತೇವೆ. ಆದರೆ ಈಗ ಅಷ್ಟು ದೊಡ್ಡ ಪ್ರದೇಶ ಕನ್ನಡಕ್ಕೆ ಸಿಕ್ಕಿಲ್ಲ. ಸಂಸ್ಕೃತವೂ ಅಷ್ಟೇ, ಅದನ್ನು ಆಡುವವರ ಸಂಖ್ಯೆಯೂ ಕಡಿಮೆ. ಒಂದು ಭಾಷೆಯ ಕ್ಷೇತ್ರವು ವಿಸ್ತಾರಗೊಳ್ಳಲು ಆ ಭಾಷೆಯು ತನ್ನ ಸತ್ವದಿಂದ ನೆರೆಹೊರೆಯವರನ್ನು ಗೆಲ್ಲಬೇಕು. ಇಂಗ್ಲಿಷನ್ನು

ನೋಡಿದರೆ ಅದು ಹೇಗೆ ವಿಸ್ತಾರಗೊಳ್ಳುತ್ತಿದೆ ಎಂಬುದು ತಿಳಿಯುತ್ತದೆ. ಭಾಷೆಯ ಇನ್ನೊಂದು ಲಕ್ಷಣವೆಂದರೆ ಅದು ಸರಳತೆಯ ಕಡೆ ಹೋಗುತ್ತದೆ. ಪ್ರಾಚೀನ ಭಾಷೆಗಳ ವ್ಯಾಕರಣವು ತುಂಬಾ ಕ್ಲಿಷ್ಟವಾಗಿರುವುದನ್ನು ನೋಡಬಹುದು. ಆಧುನಿಕ ಭಾಷೆಗಳು ಅಷ್ಟು ಕ್ಲಿಷ್ಟವಾಗಿಲ್ಲ. ಹಾಗೆ ಆಗುವುದು ಜೀವಂತ ಭಾಷೆಯ ಲಕ್ಷಣವಾಗಿದೆ. ಇದೇ ರೀತಿಯಲ್ಲಿ ಭಾಷೆಯು ತುಂಬಾ ಸೂಕ್ಷ್ಮವಾಗುತ್ತಾ ಹೋಗುತ್ತದೆ. ಒರಟಾಗಿದ್ದುದು ನಯವಾಗುತ್ತಾ ಹೋಗುತ್ತದೆ. ಸಾಂಸ್ಕೃತಿಕ ಉದ್ದೇಶಗಳಿಗೆ ಬಳಕೆಯಾಗುವ ಭಾಷೆಯು ತುಂಬಾ ನವಿರಾದ ಲಕ್ಷಣಗಳನ್ನು ರೂಢಿಸಿಕೊಳ್ಳುತ್ತದೆ. ನುಡಿಗಟ್ಟುಗಳು, ವಾಕ್ಯರಚನೆ ಇತ್ಯಾದಿಗಳು ಸೂಕ್ಷ್ಮಾತಿ ಸೂಕ್ಷ್ಮವಾಗುತ್ತಾ ಹೋಗುವುದನ್ನು ತಿಳಿಯಲು ಕಲೆ, ಸಾಹಿತ್ಯದ ವಿಮರ್ಶಕರ ಭಾಷೆಯನ್ನು ಗಮನಿಸಬೇಕು. ಸೂಕ್ಷ್ಮತೆಯು ಪ್ರಬುದ್ಧತೆಯ ಲಕ್ಷಣವೂ ಆಗಿದೆ. ಹೀಗೆ ಭಾಷೆಯ ಸ್ವರೂಪ ಮತ್ತು ಲಕ್ಷಣಗಳನ್ನು ವಿವರಿಸಬಹುದು.

## 1.4 ಭಾಷೆಗಳ ವರ್ಗೀಕರಣ

ಪ್ರಪಂಚದಲ್ಲಿ ಸಾವಿರಾರು ಭಾಷೆಗಳು ಉಪಭಾಷೆಗಳು ಇವೆ ಎಂಬುದು ನಿಮಗೆ ತಿಳಿದಿದೆಯಲ್ಲವೆ. ಮೊದಲು ಭಾಷೆಗಳನ್ನು ಎರಡು ಗುಂಪು ಮಾಡಿಕೊಳ್ಳುತ್ತಾರೆ. ಅವುಗಳೆಂದರೆ ಗ್ರಂಥ ಭಾಷೆಗಳು ಮತ್ತು ಆಡು ಭಾಷೆಗಳು. ಗ್ರಂಥ ಭಾಷೆಗಳು ಸಾಮಾನ್ಯವಾಗಿ ಆಡು ಭಾಷೆಗಳಿಗಿಂತ ಹೆಚ್ಚು ಸಮೃದ್ಧವಾಗಿರುತ್ತವೆ. ಇದಕ್ಕೆ ವಿರುದ್ಧವಾದ ಸಂದರ್ಭಗಳು ತುಂಬಾ ಕಡಿಮೆ, ಇಲ್ಲವೆ ಇಲ್ಲ ಎನ್ನಬಹುದು, ಆದಿವಾಸಿ ಜನಾಂಗದವರು ಆಡುವ ಭಾಷೆಗಳು ಸಾಮಾನ್ಯವಾಗಿ ಹಿಂದುಳಿದಿರುತ್ತವೆ. ಭಾರತೀಯ ಸುಮಾರು ೧೮ ಭಾಷೆಗಳನ್ನು ರಾಷ್ಟ್ರೀಯ ಭಾಷೆಗಳೆಂದು ಕರೆದಿದ್ದಾರೆ. ಅವುಗಳೆಲ್ಲವೂ ಸಮಾನವಾದುವು. ಅವುಗಳಲ್ಲಿ ಮೇಲು ಕೀಳು ಇಲ್ಲ. ಆದರೆ ಕೆಲವರು ಹಿಂದಿ ಮಾತ್ರ ರಾಷ್ಟ್ರದ ಭಾಷೆ ಎಂಬ ಭಾವನೆ ಹೊಂದಿದ್ದಾರೆ. ಇದು ರಾಜಕೀಯದ ವಿಷಯವಾಗುತ್ತದೆ. ಪ್ರಾಚೀನ ಕಾಲದಲ್ಲಿ ಅನೇಕ ಭಾಷೆಗಳಿದ್ದುವು ಎಂಬುದಕ್ಕೆ ಆಧಾರಗಳಿವೆ. ಅವುಗಳೆಲ್ಲವೂ ಈಗ ಅಸ್ತಿತ್ವದಲ್ಲಿಲ್ಲ. ಕೆಲವರು ಸಂಶೋಧಕರು ಅಳಿದು ಹೋಗಿರುವ ಭಾಷೆಗಳನ್ನು ಪುನರ್ ಸೃಷ್ಟಿಸಿ ಅಧ್ಯಯನ ಮಾಡಲು ಪ್ರಯತ್ನಿಸಿದ್ದಾರೆ. ಪ್ರತಿಯೊಂದು ಭಾಷೆಗೂ ತನ್ನದೇ ಆದ ಇತಿಹಾಸವಿರುತ್ತದೆ. ಕೆಲವು ಭಾಷೆಗಳ ಇತಿಹಾಸ ದೊರೆಯುವುದಿಲ್ಲ. ಆದ್ದರಿಂದ ಭಾಷೆಗಳನ್ನು ವಿವಿಧ ಗುಂಪುಗಳನ್ನಾಗಿ ಮಾಡಿಕೊಳ್ಳುವುದು ಸಾಧ್ಯವಾಗುವುದಿಲ್ಲ. ಜಗತ್ತಿನಲ್ಲಿ ಬೇರೆ ಬೇರೆ ಭೂಖಂಡಗಳಿರುವುದು ನಿಮಗೆ ತಿಳಿದಿದೆ. ಒಂದೊಂದು ಖಂಡದ ಭಾಷೆಗಳನ್ನು ಒಂದೊಂದು ಗುಂಪುಗಳನ್ನಾಗಿ ಮಾಡುವುದೂ ಕೂಡ ವೈಜ್ಞಾನಿಕವಾದುದು ಎನ್ನಿಸಿಕೊಳ್ಳುವುದಿಲ್ಲ. ಭಾಷೆಗಳನ್ನು ಆಯಾ ದೇಶ, ರಾಜ್ಯಗಳನ್ನು ಆಧರಿಸಿ ವರ್ಗೀಕರಿಸಿಕೊಳ್ಳುವ ಪ್ರಯತ್ನಗಳೂ ನಡೆದುವು. ಉದಾಹರಣೆಗೆ ಭಾರತೀಯ ಭಾಷೆಗಳೆಂದು ವರ್ಗೀಕರಣ ಮಾಡಿದರೆ ಇಲ್ಲಿರುವ ಭಾಷೆಗಳು ಒಂದೇ ಪರಿವಾರಕ್ಕೆ ಸೇರುವ ಸ್ವರೂಪ ಲಕ್ಷಣಗಳನ್ನು ಹೊಂದಿಲ್ಲವೆಂಬುದು ತಿಳಿದು ಬರುತ್ತದೆ. ಹಿಂದೂಗಳ ಭಾಷೆಗಳು, ಕ್ರಿಶ್ಚಿಯನ್ನರ ಭಾಷೆಗಳು, ಮುಸ್ಲಿಮರ ಭಾಷೆಗಳು ಇತ್ಯಾದಿಯಾಗಿ ಪ್ರತ್ಯೇಕ ಗುಂಪುಗಳನ್ನು ಮಾಡುವುದು ಸರಿಯಾಗುವುದಿಲ್ಲ. ಭಾರತೀಯರ ವೃತ್ತಿಗಳಿಗೆ ಅನುಗುಣವಾಗಿ ವಿಭಾಗಿಸಲೂ ಸಾಧ್ಯವಾಗುವುದಿಲ್ಲ. ಭಾಷೆಯು ಜಾತಿ, ಜನಾಂಗ, ಧರ್ಮಗಳಿಗೆ ಸಂಬಂಧಿಸಿರುವುದಿಲ್ಲ. ಜನರು ಯಾವ ಸಮಾಜ, ಸಂಸ್ಕೃತಿಗಳಿಗಾದರೂ ಸೇರಿರಲಿ, ಪರಿಸರ ಪರಿಸ್ಥಿತಿಗಳನ್ನು ಅವಲಂಬಿಸಿ ಬೇರೆ ಬೇರೆ ಭಾಷೆಗಳನ್ನು ಆಡುತ್ತಿರುತ್ತಾರೆ.

ಕೆಲವರು ಭಾಷೆಗಳನ್ನು ವರ್ಗೀಕರಿಸುವಾಗ ಅವುಗಳ ಮೂಲ ಭಾಷೆಗಳನ್ನು ಆಧರಿಸಿ ವಿಭಾಗಿಸುವುದೂ ಕಂಡು ಬರುತ್ತದೆ. ಒಂದೇ ಭಾಷೆಯಿಂದ ಹುಟ್ಟಿದ ಕೆಲವು ಭಾಷೆಗಳಲ್ಲಿ ಒಂದು ಬಗೆಯ ಸಾಮಾನ್ಯ ಲಕ್ಷಣಗಳಿರುತ್ತವೆ, ಕೆಲವು ಸಲ ಸಾಮಾನ್ಯ ಲಕ್ಷಣಗಳು ಅಸ್ಪಷ್ಟವಾಗಿರುತ್ತವೆ, ಮತ್ತೆ ಕೆಲವೊಮ್ಮೆ ಸಂಬಂಧದ ಲಕ್ಷಣಗಳೇ ಕಾಣಿಸುವುದಿಲ್ಲ. ಹೀಗೆ ಸಂಶೋಧಕರ ಪ್ರಯತ್ನಗಳು ಯಶಸ್ವಿಯಾಗದಿರಲು ಭಾಷೆಗಳ ಸ್ವರೂಪ ಲಕ್ಷಣಗಳೇ ಕಾರಣವಾಗಿವೆ. ಆದರೂ ನಡೆದಿರುವ ಪ್ರಯತ್ನಗಳನ್ನು ಕೆಳಕಂಡಂತೆ ಸ್ಥೂಲವಾಗಿ ತೋರಿಸಬಹುದು.

**ಐತಿಹಾಸಿಕ ವರ್ಗೀಕರಣ :**

ಭಾಷೆಗಳು ಹೊಂದಿರುವ ಇತಿಹಾಸವನ್ನು ಆಧರಿಸಿ ಮೂಲಭಾಷೆಗಳು, ಪ್ರಾಚೀನ ಭಾಷೆಗಳು, ಮಧ್ಯಕಾಲದ ಭಾಷೆಗಳು, ಆಧುನಿಕ ಭಾಷೆಗಳು ಎಂದು ಬೇರೆ ಬೇರೆ ವರ್ಗಗಳನ್ನು ಮಾಡಿಕೊಳ್ಳಲಾಗಿದೆ. ಇದಕ್ಕೆ ಅಗತ್ಯವಾದ ದಾಖಲೆಗಳು, ಗ್ರಂಥಗಳು ಮತ್ತಿತರ ಸಾಮಗ್ರಿಗಳು ಸಿಗದೆ ಹೋದರೆ ಸಮರ್ಪಕವಾದ ವರ್ಗೀಕರಣ ಕಷ್ಟವಾಗುತ್ತದೆ. ಜಗತ್ತಿನಲ್ಲಿ ಬರಹದ ಭಾಷೆಗಳಿಗಿಂತ ಆಡು ಭಾಷೆಗಳ ಸಂಖ್ಯೆ ಹೆಚ್ಚು. ಬರಹದ ಭಾಷೆಗಳಿಗೆ ಮಾತ್ರ ಮೇಲೆ ಹೇಳಲಾದ ವರ್ಗೀಕರಣ ಸಾಧ್ಯವಾಗುತ್ತದೆ. ಭಾಷೆಗಳ ಬೆಳವಣಿಗೆಯ ನಾನಾ ಹಂತಗಳನ್ನು ಗಮನಿಸಿ ಈ ರೀತಿಯ ವರ್ಗೀಕರಣವನ್ನು ಮಾಡಿಕೊಳ್ಳಲಾಗುತ್ತದೆ.

**ಜಾನಾಂಗಿಕ ವರ್ಗೀಕರಣ :**

ಮಾನವಶಾಸ್ತ್ರದಲ್ಲಿ ಜನರನ್ನು ಬೇರೆ ಬೇರೆ ವರ್ಗಗಳಿಗೆ ಸೇರಿದಂತೆ ಗುರಿತಿಸಲಾಗಿದೆ. ಅವರ ಗಾತ್ರ, ಎತ್ತರ, ಬಣ್ಣ ಮುಂತಾದ ಲಕ್ಷಣಗಳನ್ನು ಆಧರಿಸಿ ಜನಾಂಗ ವಿಭಜನೆ ನಡೆಯುತ್ತದೆ. ಉದಾ: ನೀಗ್ರೋಗಳು, ಕಕೇಶಿಯನ್ನರು, ಮಂಗೋಲಿಯನ್ನರು ಇತ್ಯಾದಿ ಜನಾಂಗಗಳನ್ನು ಗುರುತಿಸಲಾಗಿದೆ. ಈ ಜನಾಂಗದವರು ಒಂದೇ ಕಡೆ ನೆಲಸದೆ ಈಗ ಹಲವಾರು ದೇಶಗಳಿಗೆ ವಲಸೆ ಹೋಗಿ ನೆಲಸಿರುತ್ತಾರೆ. ಆದ್ದರಿಂದ ಅವರು ಒಂದೇ ಭಾಷಾ ವರ್ಗಕ್ಕೆ ಸೇರಿದ ಭಾಷೆಗಳನ್ನು ಆಡುವುದು ಅನುಮಾನಾಸ್ಪದವಾದುದು. ಅವರು ಒಂದೇ ಜನಾಂಗದವರಾದರೂ ಆಡುವ ಭಾಷೆಗಳು ಅವರು ನೆಲಸಿರುವ ನೆಲದ ಭಾಷೆಯಾಗಿರಬಹುದು. ಆದ್ದರಿಂದ ಈ ಬಗೆಯ ವರ್ಗೀಕರಣವೂ ಸಮರ್ಪಕವಾಗಿರುವುದಿಲ್ಲ.

**ಭೌಗೋಳಿಕ ವರ್ಗೀಕರಣ :**

ಭಾಷೆಗಳನ್ನು ಅವುಗಳು ದೊರೆಯುವ ಸ್ಥಳಗಳನ್ನು ಆಧರಿಸಿ ವರ್ಗೀಕರಿಸುವ ವಿಧಾನವೂ ಒಂದು. ಭಾರತೀಯ ಭಾಷೆಗಳು, ಚೀನಾ ಭಾಷೆಗಳು, ರಷ್ಯಾ ಭಾಷೆಗಳು ಮುಂತಾಗಿ ವಿಭಜಿಸಿ ನೋಡಬಹುದು. ಆದರೆ ಈ ದೇಶಗಳಲ್ಲಿ ಒಂದೇ ಭಾಷೆಯನ್ನಾಗಲೀ, ಒಂದೇ ಪರಿವಾರಕ್ಕೆ ಸೇರಿದ ಭಾಷೆಗಳನ್ನಾಗಲೀ ಆಡುತ್ತಾರೆಂದು ಹೇಳಲು ಸಾಧ್ಯವಿಲ್ಲ. ಭಾರತದಲ್ಲಿ ಒಂದು ಸಾವಿರದ ಎಂಟುನೂರಕ್ಕೂ ಹೆಚ್ಚು ಭಾಷೆಗಳಿವೆ ಎಂದೂ, ಆಫ್ರಿಕಾದಲ್ಲಿ ಐನೂರಕ್ಕಿಂತ ಹೆಚ್ಚು ಭಾಷೆಗಳಿವೆ ಎಂದೂ ಹೇಳಲಾಗಿದೆ. ಇವೆಲ್ಲವೂ ಒಂದೊಂದೇ ಪರಿವಾರಕ್ಕೆ ಸೇರಿರುವುದು ಸಾಧ್ಯವೇ ಇಲ್ಲ.

**ವಾಂಶಿಕ ವರ್ಗೀಕರಣ :**

ಪ್ರಪಂಚದ ಇಂದಿನ ಯಾವುದೇ ಭಾಷೆಗೆ ಒಂದು ಪ್ರಾಚೀನವಾದ ಮೂಲ ಭಾಷೆ ಇರುತ್ತದೆ. ಆ ಮೂಲ ಭಾಷೆಯಿಂದ ಹಲವು ಭಾಷೆಗಳು ಹುಟ್ಟಿ ಬೆಳೆದಿರುತ್ತವೆ, ಸ್ವತಂತ್ರವೂ ಆಗಿರುತ್ತವೆ. ಇಂತಹ ಭಾಷೆಗಳನ್ನು ಸೋದರ ಭಾಷೆಗಳು ಎಂದು ಕರೆಯುತ್ತಾರೆ. ಈ ಸೋದರ ಭಾಷೆಗಳಿಂದ ಮತ್ತೆ ಮರಿ ಭಾಷೆಗಳು ಹುಟ್ಟಿಕೊಳ್ಳುತ್ತವೆ. ಇವುಗಳನ್ನು ಉಪಭಾಷೆಗಳು ಎಂದು ಕರೆಯುತ್ತಾರೆ. ಇವೆಲ್ಲವುಗಳಲ್ಲಿ ಒಂದು ರೀತಿಯ ಸಾಮ್ಯವೂ ಇರುತ್ತದೆ. ಪ್ರಪಂಚದ ಎಲ್ಲಾ ಭಾಷೆಗಳಿಗೂ ಒಂದೇ ಮೂಲಭಾಷೆ ಇರುವುದಿಲ್ಲ. ಕೆಲವರು ಇದೆ, ಇತ್ತು ಎಂದು ಹೇಳುತ್ತಾರೆ. ಅದು ಭಾವನಾತ್ಮಕವಾದ ಹೇಳಿಕೆಯಾಗಿದೆ ಹಿಂದೂಗಳು ಸಂಸ್ಕೃತವನ್ನು ದೇವ ಭಾಷೆ ಎಂದಂತೆ ಅರಬ್ಬರು ಅರ್ಯಾಬಿಕ್ ಅನ್ನು, ಗ್ರೀಕರು ಲ್ಯಾಟಿನ್ ಅನ್ನು ದೇವಭಾಷೆ ಎನ್ನುತ್ತಾರೆ. ಇದೆಲ್ಲ ಹಳೆಯ ಕಾಲದ ಮಾತು. ಎಲ್ಲಾ ಭಾಷೆಗಳೂ ಮನುಷ್ಯನು ಸೃಷ್ಟಿಸಿದ ಭಾಷೆಗಳೇ ಆಗಿವೆ. ಪ್ರಪಂಚಕ್ಕೆಲ್ಲ ಒಂದೇ ಮೂಲಭಾಷೆ ಇತ್ತು ಎಂದು ಯಾವ ಭಾಷಾ ವಿಜ್ಞಾನಿಯೂ ಹೇಳಿಲ್ಲ. ಎಷ್ಟೋ ಮೂಲಭಾಷೆಗಳು ಇದ್ದು ಅವುಗಳಿಂದ ಸೋದರ ಭಾಷೆಗಳು (ಜ್ಞಾತಿ ಭಾಷೆಗಳು) ಹುಟ್ಟಿ ಬೆಳೆದುವು. ಹೀಗೆ ಒಂದರಿಂದ ಹಲವು ಕವಲುಗಳಾಗಿ ಒಡೆದು ಭಾಷೆಗಳು ಬೆಳೆದಿವೆ ಎಂದು ಹೇಳುತ್ತಾರೆ. ಕ್ರಿ.ಶ. ೧೮೨೨ ರಲ್ಲಿ ಜರ್ಮನಿಯ ಹಮ್‌ಬೋಲ್ಟ್ ಎಂಬಾತನು ಪ್ರಪಂಚದ ಭಾಷೆಗಳನ್ನು ಪರಿಶೀಲಿಸಿ ಅವುಗಳನ್ನು ಸುಮಾರು ಹದಿಮೂರು ಪರಿವಾರಗಳನ್ನಾಗಿ ವಿಂಗಡಿಸಿದನು. ಪಾಟ್‌ರಿಚ್ ಎಂಬಾತನು ಇದೇ ರೀತಿ ಎಲ್ಲ ಭಾಷೆಗಳನ್ನು ಒಟ್ಟು ಹತ್ತು ಪರಿವಾರಗಳನ್ನಾಗಿ ವಿಂಗಡಿಸಿದನು. ಥಾಮಸ್‌ಗ್ರೇ ಎಂಬಾತನು ಇಪ್ಪತ್ತು ಪರಿವಾರಗಳನ್ನಾಗಿ ವಿಂಗಡಿಸಿದನು. ಬಹುತೇಕ ಭಾಷಾ ವಿಜ್ಞಾನಿಗಳು ಏಳು ಪರಿವಾರಗಳನ್ನಾಗಿ ವರ್ಗೀಕರಿಸುವತ್ತ ಒಲವು ತೋರಿಸಿದ್ದಾರೆ. ಅವುಗಳೆಂದರೆ

೧. ಇಂಡೋ ಯೂರೋಪಿಯನ್ ಭಾಷಾ ಪರಿವಾರ
೨. ಆಸ್ಟ್ರೋ ಏಷಿಯಾಟಿಕ್ ಭಾಷಾ ಪರಿವಾರ
೩. ಸೈನೋಟಿಬೆಟಿಯನ್ ಭಾಷಾ ಪರಿವಾರ
೪. ಅಮೆರಿಕನ್ ಭಾಷಾ ಪರಿವಾರ
೫. ಆಫ್ರಿಕನ್ ಭಾಷಾ ಪರಿವಾರ
೬. ದ್ರಾವಿಡ ಭಾಷಾ ಪರಿವಾರ
೭. ಫಿನ್ನೋ ಉಗ್ರಿಕ್ ಭಾಷಾ ಪರಿವಾರ

ಮೇಲಿನ ಯಾವ ಪರಿವಾರಕ್ಕೂ ಸೇರದ ಕೆಲವು ಭಾಷೆಗಳು, ಉಪಭಾಷೆಗಳು ಜಗತ್ತಿನಾದ್ಯಂತ ರೂಢಿಯಲ್ಲಿವೆ. ಅವು ಅವರ್ಗೀಕೃತ ಭಾಷೆಗಳೆನ್ನಿಸಿಕೊಳ್ಳುತ್ತವೆ.

**ರಾಚನಿಕ ವರ್ಗೀಕರಣ :**

ಭಾಷೆಗಳ ರಚನಾಕ್ರಮವು ಇಲ್ಲಿ ಮುಖ್ಯವಾದ ಅಂಶವಾಗಿದೆ. ಧ್ವನಿ, ಪದ, ಪದರಚನೆ, ವಾಕ್ಯರಚನೆ, ವ್ಯಾಕರಣ ಮುಂತಾದುವನ್ನು ಪರಿಗಣಿಸಿ ಭಾಷೆಗಳನ್ನು ವರ್ಗೀಕರಿಸುವ ವಿಧಾನವು ವೈಜ್ಞಾನಿಕವಾದುದು ಎಂಬ ವಿಶ್ವಾಸ ಮೂಡಿತು. ಭಾಷೆಗಳ ರಚನಾತ್ಮಕ ಅಂಶಗಳನ್ನು ಆಧರಿಸಿ ವರ್ಗೀಕರಣ

ಮಾಡಲಾಗಿದೆ. ವ್ಯಾಕರಣದ ಅಂಶಗಳು ಒಂದು ಭಾಷೆಯಿಂದ ಇನ್ನೊಂದು ಭಾಷೆಗೆ ಹೋಗುವುದು ಅತ್ಯಂತ ವಿರಳ. ಆದ್ದರಿಂದ ಜಗತ್ತಿನ ಭಾಷೆಗಳನ್ನು ಈ ಕೆಳಕಂಡಂತೆ ವರ್ಗೀಕರಿಸಲಾಗಿದೆ.

೧. ಅಯೋಗಾತ್ಮಕ ಭಾಷೆಗಳು: ಪದಗಳ ಸ್ಥಾನ ಬಲದಿಂದಲೇ ಅರ್ಥವನ್ನು ಕೊಡುವ ಭಾಷೆಗಳಿವು. ಪ್ರತ್ಯಯಗಳನ್ನು ಅರ್ಥಕ್ಕಾಗಿ ಅವಲಂಭಿಸುವುದಿಲ್ಲ. ಈ ವರ್ಗದ ಭಾಷೆಗಳಿಗೆ ಚೀನ ಭಾಷೆ ಒಳ್ಳೆಯ ಉದಾಹರಣೆಯಾಗಿದೆ.

೨. ಸಮುಚ್ಚಾಯಕ ಭಾಷೆಗಳು ಮತ್ತು ೩ ಪ್ರಾತ್ಯಯಿಕ ಭಾಷೆಗಳು: ಈ ಭಾಷೆಗಳು ಮೂಲತಃ ಒಂದೇ ಸ್ವರೂಪದವು. ಎರಡರಲ್ಲಿಯೂ ಪ್ರತ್ಯಯಕ್ಕೆ ಪ್ರಾಧಾನ್ಯವಿದೆ. ಪ್ರತ್ಯಯಗಳ ಮೂಲಕವಾಗಿಯೇ ವಾಕ್ಯದಲ್ಲಿಯೇ ಪದಗಳ ಸಂಬಂಧವನ್ನು ತಿಳಿದುಕೊಳ್ಳಬೇಕು. ಈ ಭಾಷೆಗಳಲ್ಲಿರುವ ಪ್ರತ್ಯಯಗಳು ಮೂಲತಃ ಸ್ವತಂತ್ರ ಶಬ್ದಗಳೇ ಆಗಿದ್ದುವು. ಅನಂತರ ಪದಗಳೊಡನೆ ಸೇರಿ ರೂಪ ಬದಲಾವಣೆ ಪಡೆದುವು. ಕನ್ನಡ ಮತ್ತು ಸಂಸ್ಕೃತಗಳನ್ನು ಉದಾಹರಣೆಯನ್ನಾಗಿ ತೆಗೆದುಕೊಂಡರೆ, ಕನ್ನಡದಲ್ಲಿ ಪ್ರತ್ಯಯಗಳು ಒಂದು ಕಾಲಕ್ಕೆ ಸ್ವತಂತ್ರ ಶಬ್ದಗಳಾಗಿದ್ದುವೆಂಬುದನ್ನು ಗುರುತಿಸಲು ಸಾಧ್ಯ. ಸಂಸ್ಕೃತದಲ್ಲಿ ಪ್ರತ್ಯಯಗಳ ಮೂಲ ಸ್ವರೂಪ ಏನೆಂಬುದು ತಿಳಿಯುವುದೇ ಇಲ್ಲ.

೪. ಬಹುಪದಯುಕ್ತ ಭಾಷೆಗಳು: ಪದ ರಚನೆಗಳಲ್ಲಿ ಅವುಗಳ ಮೂಲ ರೂಪ ಮತ್ತು ಪ್ರತ್ಯಯ ಎರಡರಲ್ಲಿಯೂ ವ್ಯತ್ಯಾಸ ಕಾಣಿಸಿಕೊಳ್ಳುತ್ತದೆಯೋ ಅಂತಹ ರಚನೆಗಳನ್ನುಳ್ಳ ಭಾಷೆಗಳನ್ನು ಬಹುಪದಯುಕ್ತ ಭಾಷೆಗಳು ಎನ್ನುತ್ತಾರೆ. ದೊಡ್ಡ ದೊಡ್ಡ ಪದಗಳು ವಾಕ್ಯಗಳಾಗಿಯೂ, ವಾಕ್ಯಗಳೇ ಪದಗಳಾಗಿಯೂ ಕಾಣಿಸಿಕೊಳ್ಳಬಹುದು. ಉತ್ತರ ಅಮೆರಿಕ ಮೂಲ ನಿವಾಸಿಗಳು ಆಡುವ ಭಾಷೆಗಳಲ್ಲಿ ಈ ಲಕ್ಷಣವನ್ನು ನೋಡಬಹುದು.

೫. ಅಂತರ್‌ಗಮಕ ಭಾಷೆಗಳು: ಯಾವ ಭಾಷೆಗಳ ಪದರಚನೆಗಳಲ್ಲಿ ಪದಗಳ ಮೂಲ ರೂಪಗಳಿಗೆ ಬೇರೆ ಬೇರೆ ಪ್ರತ್ಯಯಗಳನ್ನು ಹಚ್ಚಿದಾಗ ಅವುಗಳ ಮೂಲ ರೂಪಗಳಲ್ಲಿ ಹೆಚ್ಚಿನ ವ್ಯತ್ಯಾಸವು ಕಾಣಿಸಿಕೊಳ್ಳುವುದಿಲ್ಲವೋ ಅವುಗಳನ್ನು ಅಂತರ್‌ಗಮಕ ಭಾಷೆಗಳೆನ್ನುತ್ತಾರೆ. ಹೀಬ್ರೂ, ಹಿಟ್ಟೈಟ್ ಮುಂತಾದ ಭಾಷೆಗಳು ಈ ಗುಂಪಿಗೆ ಸೇರುತ್ತವೆ.

## 1.5 ದ್ರಾವಿಡ ಭಾಷಾ ಪರಿವಾರ :

ವಾಂಶಿಕ ವರ್ಗೀಕರಣದ ವಿಧಾನವನ್ನು ಕುರಿತು ನೋಡುವಾಗ ಆರನೆಯದಾದ ದ್ರಾವಿಡ ಭಾಷಾ ಪರಿವಾರದ ಹೆಸರನ್ನು ನೋಡಿದ್ದೇವಷ್ಟೆ. ಅದು ಭಾರತದ ಎರಡನೆಯ ದೊಡ್ಡ ಭಾಷಾ ಪರಿವಾರ ಎನ್ನುವುದೂ ಅಲ್ಲಿ ಬಂದಿದೆ. ಈ ಪರಿವಾರಕ್ಕೆ ಸೇರಿದ ಭಾಷೆಗಳು ಮತ್ತು ಉಪಭಾಷೆಗಳು ನೇಪಾಳದಿಂದ ಹಿಡಿದು ಕನ್ಯಾಕುಮಾರಿಯವರೆಗೂ ಮತ್ತು ಪಾಕಿಸ್ತಾನದಿಂದ ಹಿಡಿದು ಪಶ್ಚಿಮ ಬಂಗಾಳದವರೆಗೂ ವ್ಯಾಪಿಸಿಕೊಂಡಿವೆ. ಈ ಭಾಷೆಗಳನ್ನು ಸುಮಾರು ೨೦ ಕೋಟಿಗಿಂತ ಹೆಚ್ಚು ಜನರು ಮಾತನಾಡುತ್ತಾರೆ. ಈ ದ್ರಾವಿಡರು ಯಾರು? ಅವರು ಭಾರತದ ಮೂಲನಿವಾಸಿಗಳೆ? ಅಥವಾ ಎಲ್ಲಿಂದಲೋ ಬಂದು ನೆಲೆಸಿದವರೆ? ಈ ಪ್ರಶ್ನೆಗಳು ಮುಖ್ಯವಾಗುತ್ತವೆ. ಕೆಲವು ಸಂಶೋಧಕರ ಪ್ರಕಾರ ಭಾರತಕ್ಕೆ ನೀಗ್ರೊ

ಜನಾಂಗ, ಆಸ್ಟ್ರಿಕ್ ಜನಾಂಗ ಮೊದಲು ವಲಸೆ ಬಂದರೆಂದೂ, ಅವರ ನಂತರ ದ್ರಾವಿಡ ಜನಾಂಗದವರು ಬಂದರೆಂದೂ, ಅನಂತರ ಆರ್ಯರು, ಕಡೆಯಲ್ಲಿ ಮಂಗೋಲಿಯನ್ ಬುಡಕಟ್ಟು ಜನಾಂಗ ಬಂದಿತೆಂದು ತಿಳಿಯಲಾಗಿದೆ. ದ್ರಾವಿಡರನ್ನು ಮೆಡಿಟರೇನಿಯನ್ ಜನಾಂಗದವರೆಂದೂ ಕೆಲವರು ಹೇಳುತ್ತಾರೆ. ಕಕೇಶಿಯನ್ ಬುಡಕಟ್ಟಿನವರೆಂದೂ ಇನ್ನು ಕೆಲವರು ವಾದಿಸುತ್ತಾರೆ. ದ್ರಾವಿಡರು ಆರ್ಯರ ಹಾಗೆ ಅಲೆಮಾರಿ ಜನಾಂಗವಲ್ಲ ಎಂಬ ವಾದವಿದೆ. ಎಸ್.ಕೆ. ಚಟರ್ಜಿಯವರು 'ದ್ರಾವಿಡರು ಭಾರತೀಯ ಸಂಸ್ಕೃತಿಗೆ ಸಲ್ಲಿಸಿದ ಕಾಣಿಕೆ ಗಮನಾರ್ಹವಾದುದು. ಶಿವಪಾರ್ವತಿಯರ ಆರಾಧನೆ ನಾಗಪೂಜೆ, ಅರಳಿಮರದ ಪೂಜೆ, ಯೋಗತತ್ವ ವಿಚಾರ ಮುಂತಾದುವು ದ್ರಾವಿಡ ಸಂಸ್ಕೃತಿಯಲ್ಲಿ ಒಡೆದು ಕಾಣುವ ಅಂಶಗಳು, ಕಲೆ ಮತ್ತು ಅಧ್ಯಾತ್ಮದ ವಿಚಾರದಲ್ಲಿ ಆರ್ಯರಿಗಿಂತ ದ್ರಾವಿಡರು ಶ್ರೇಷ್ಠರಾಗಿದ್ದರು. ದ್ರಾವಿಡರ ಅನುಭಾವ ಪ್ರಜ್ಞೆ, ಧಾರ್ಮಿಕ ಪೂಜೆ, ದೈವದೊಡನೆ ಐಕ್ಯ ಪಡೆಯುವ ವಿಧಾನ, ಇವೆಲ್ಲವೂ ಅವರ ಅನುಭಾವ ಜೀವನದ ಅಭಿವ್ಯಕ್ತಿಯನ್ನು ತೋರಿಸುತ್ತವೆ' ಎಂದು ಹೇಳಿದ್ದಾರೆ. ಆರ್ಯರು ಯಜ್ಞ ನೆರವೇರಿಸುವುದಕ್ಕೆ ಪಶುಬಲಿಕೊಡುವುದಕ್ಕೆ ಅಗ್ನಿ ತೃಪ್ತಿಗೆ ಹೆಚ್ಚು ಬೆಲೆ ಕೊಟ್ಟರೆ ದ್ರಾವಿಡರು ಮಾನಸಿಕ ಅಥವಾ ಅಂತರ್ಮುಖೀ ಪೂಜಾ ಪದ್ಧತಿಗೆ ಮಹತ್ವ ನೀಡಿದರು. ಪೂಜಾ ರೀತಿಯನ್ನು ಮತಕ್ಕನುಗುಣವಾಗಿ ನಡೆಸಿಕೊಂಡು ಬಂದ ದ್ರಾವಿಡರು ಅದನ್ನು ತಮ್ಮ ಸಂಸ್ಕೃತಿಯಲ್ಲಿ ವಿಶಿಷ್ಟ ರೀತಿಯಲ್ಲಿ ಅಳವಡಿಸಿಕೊಂಡಿದ್ದರು. ಸ್ವಾರಸ್ಯವೆಂದರೆ ಪೂಜೆ ಎಂಬ ಶಬ್ದವೇ ದ್ರಾವಿಡ ಶಬ್ದ. ಹೇಗೆಂದರೆ ಪೂಜೆ ಶಬ್ದವನ್ನು ಬಿಡಿಸಿದರೆ ಪೂ+ಚೆಯ್ ಎಂದಾಗುತ್ತದೆ. ಅಂದರೆ ಹೂವಿನಿಂದ ಮಾಡುವ ಕಾರ್ಯ ಎಂದು ಅರ್ಥ. ಇಡೀ ವಿಶ್ವವೇ ದೇವರ ಚೈತನ್ಯದಿಂದ ತುಂಬಿದೆ. ಒಂದು ಮೂರ್ತಿ, ಚಿತ್ರ, ಮಡಕೆ ಅಥವಾ ಕಲ್ಲು, ಮರದ ಕೊಂಬೆ ಇವುಗಳಲ್ಲಿ ಪರಮ ಚೈತನ್ಯವನ್ನು ಆಹ್ವಾನಿಸಿ ಪೂಜಾವಿಧಿಯನ್ನು ನೆರವೇರಿಸಲಾಗುತ್ತದೆ. ಇದು ಆರ್ಯರ 'ಹೋಮ' ಪ್ರಕ್ರಿಯೆಗಿಂತ ಭಿನ್ನವಾದುದು. ಹೋಮದಲ್ಲಿ 'ನೀನು' ತೆಗೆದುಕೋ ಮತ್ತು ಅದಕ್ಕೆ ಪ್ರತಿಯಾಗಿ 'ನನಗೆ' ಕೊಡು ಎಂಬ ವರ್ತನೆ ಕಂಡು ಬರುತ್ತದೆ. ದ್ರಾವಿಡ ಪೂಜೆಯಲ್ಲಿ ಆ ಭಾವನೆ ಇಲ್ಲ. ದ್ರಾವಿಡರು ಬಂದ ನಂತರ ಆರ್ಯರು ಭಾರತವನ್ನು ಪ್ರವೇಶಿಸಿದರು. ಅನಂತರ ಈಶಾನ್ಯ ಭಾಗದಿಂದ ಮಂಗೋಲಿಯನ್ ಜನಾಂಗ ವಲಸೆ ಬಂದಿತು. ಸೈನೋ ಟಿಬೆಟನ್ ಭಾಷೆಗಳನ್ನು ಆಡುವ ಇವರು ನೇಪಾಳ, ಅಸ್ಸಾಮ್, ಬಿಹಾರ ಮುಂತಾದ ಪ್ರದೇಶಗಳಲ್ಲಿ ನೆಲೆ ನಿಂತರು. ಗೂರ್ಖಿ, ನಾಗಾ, ಸಿಕ್ಕಿಮ್ ಜನರು ಮೂಲತಃ ಈ ಜನಾಂಗಕ್ಕೆ ಸೇರಿದವರು.

ಆರ್ಯರು, ದ್ರಾವಿಡರು ಭಾರತದ ಮೂಲನಿವಾಸಿಗಳೇ ಅಥವಾ ವಲಸೆ ಬಂದವರೆ ಎಂಬ ವಿಚಾರ ಸದ್ಯಕ್ಕೆ ಅಗತ್ಯವಿಲ್ಲ. ನಮಗೆ ಮುಖ್ಯವಾದುದೆಂದರೆ ಪ್ರಪಂಚದಲ್ಲಿ ಇರುವ ಯಾವುದಾದರೂ ದೊಡ್ಡ ಪರಿವಾರಕ್ಕೆ ದ್ರಾವಿಡ ಭಾಷೆಗಳು ಸೇರುತ್ತವೆಯೆ ಎಂಬುದು. ಇದನ್ನು ಕೆಲವರು ಚರ್ಚಿಸಿದ್ದಾರೆ. ಒಬ್ಬ ವಿದ್ವಾಂಸರು ಕೆಲ್ಟಿಕ್ ಮತ್ತು ಟ್ಯುಟಾನಿಕ್ ಭಾಷೆಗಳಿಗೂ ದ್ರಾವಿಡ ಭಾಷೆಗಳಿಗೂ ಸಂಬಂಧವನ್ನು ಕಲ್ಪಿಸಿದ್ದಾರೆ. ಇನ್ನೊಬ್ಬರು ದ್ರಾವಿಡ ಭಾಷೆಗೆ ಸಿಥಿಯನ್ ಭಾಷೆಯ ಸಂಬಂಧವಿದೆ ಎಂದಿದ್ದಾರೆ. ಎಲ್ಲಕ್ಕಿಂತ ಮುಖ್ಯವಾದುದು ಎಂದರೆ ದ್ರಾವಿಡ ಭಾಷೆಗಳಿಗೂ ಸಂಸ್ಕೃತಕ್ಕೂ ಸಂಬಂಧವಿದೆಯೆ ಎಂಬುದು. ಅದನ್ನು ಮುಂದೆ ನೋಡಬಹುದು. ಪ್ರಸಿದ್ಧ ಭಾಷಾ ವಿಜ್ಞಾನಿಗಳು ಸಂಶೋಧನೆಯಿಂದ ಕಂಡುಕೊಂಡ ಸತ್ಯವೆಂದರೆ ದ್ರಾವಿಡ ಭಾಷೆಗಳು ಪ್ರತ್ಯೇಕ ಪರಿವಾರಕ್ಕೆ ಸೇರುತ್ತವೆ ಮತ್ತು ಸಂಸ್ಕೃತವು ಇಂಡೋ-ಯೂರೋಪಿಯನ್ ಪರಿವಾರಕ್ಕೆ ಸೇರುತ್ತದೆ ಎನ್ನುವುದು. ಈಗ ಇರುವ ದ್ರಾವಿಡ ಭಾಷೆಗಳಿಗೆ ಮಾತೃಸ್ಥಾನದಲ್ಲಿರಬಹುದಾದ ಒಂದು ಭಾಷೆ ಇದ್ದಿರಬೇಕು. ಅದನ್ನು ಮೂಲ ದ್ರಾವಿಡ ಭಾಷೆ ಎಂದು

ಕರೆಯಬಹುದು ಎಂದು ವಿದ್ವಾಂಸರು ಹೇಳುತ್ತಾರೆ. ಆದರೆ ಮೂಲ ದ್ರಾವಿಡ ಭಾಷೆಯ ಬಗ್ಗೆ ಯಾವ ಸಾಕ್ಷ್ಯಾಧಾರಗಳು ಸಿಗುವುದಿಲ್ಲ.

## 1.5.0 ದ್ರಾವಿಡ ಭಾಷೆಗಳ ವರ್ಗೀಕರಣ :

ಭಾಷಾ ವಿಜ್ಞಾನಿಗಳಾದ ವೈಟ್ ಎಲ್ಲಿಸ್, ಕಿಟ್ಟಿಲ್, ಕಾಲ್ಡ್‌ವೆಲ್, ಬ್ರೌನ್, ಗುಂಡರ್ಟ್, ಗ್ರಿಯರ್‌ಸನ್ ಮುಂತಾದವರು ದ್ರಾವಿಡ ಭಾಷೆಗಳ ಬಗ್ಗೆ ಹೆಚ್ಚು ಕೆಲಸ ಮಾಡಿದ್ದಾರೆ. ಅವರ ಪ್ರಕಾರ ದ್ರಾವಿಡ ಭಾಷಾ ಪರಿವಾರದಲ್ಲಿ ನೂರಮೂವತ್ತಕ್ಕೂ ಹೆಚ್ಚು ಭಾಷೆಗಳಿವೆ. ಇವುಗಳಲ್ಲಿ ಸುಮಾರು ಇಪ್ಪತ್ತಾರು ಭಾಷೆಗಳು ಬೆಳಕಿಗೆ ಬಂದಿವೆ. ಆದಿವಾಸಿ ಜನರು ಆಡುವ ಬೇರೆ ಬೇರೆ ಭಾಷೆಗಳ ಬಗ್ಗೆ ಯಾವ ಖಚಿತ ಆಧಾರಗಳೂ ದೊರೆಯುವುದಿಲ್ಲ. ಹಿಂದುಳಿದ ಬುಡಕಟ್ಟು ಜನರು ಆಡುವ ಭಾಷೆಗಳನ್ನು ಅಧ್ಯಯನ ಮಾಡಿದರೆ ಅದರಿಂದ ದ್ರಾವಿಡ ಜನಾಂಗ, ಸಮಾಜ, ಸಂಸ್ಕೃತಿಗೆ ಸಂಬಂಧಿಸಿದ ಕೆಲವು ಹೊಸ ವಿಚಾರಗಳು ಹೊರಬರಬಹುದು. ದ್ರಾವಿಡ ಭಾಷೆಗಳನ್ನು ಎಂ.ಬಿ. ಎಮಿನೋ ಎಂಬ ಭಾಷಾವಿಜ್ಞಾನಿಯು ದಕ್ಷಿಣ ದ್ರಾವಿಡ, ಮಧ್ಯದ್ರಾವಿಡ, ಉತ್ತರ ದ್ರಾವಿಡ ಭಾಷೆಗಳು ಎಂದು ಮೂರು ವರ್ಗಗಳಲ್ಲಿ ವರ್ಗೀಕರಿಸಿಕೊಂಡಿದ್ದಾರೆ.

### 1.5.1 ದಕ್ಷಿಣ ದ್ರಾವಿಡ ಭಾಷೆಗಳು

ದಕ್ಷಿಣ ಭಾರತದ ಬೇರೆ ಬೇರೆ ಭಾಗಗಳಲ್ಲಿ ಮಾತನಾಡುವ ದ್ರಾವಿಡ ಭಾಷೆಗಳನ್ನು ದಕ್ಷಿಣ ದ್ರಾವಿಡ ಭಾಷೆಗಳೆಂದು ಕರೆಯಲಾಗಿದೆ. ಇದರಲ್ಲಿ ನಾಲ್ಕು ಉಪವರ್ಗಗಳಿವೆ. ಅವುಗಳೆಂದರೆ ತಮಿಳು, ಮಲಯಾಳಂ ಭಾಷಾ ವರ್ಗ, ಕನ್ನಡ ಭಾಷಾ ವರ್ಗ, ತುಳು ಭಾಷಾ ವರ್ಗ ಮತ್ತು ತೆಲುಗು ಭಾಷಾ ವರ್ಗ.

**ತಮಿಳು-ಮಲಯಾಳಂ ಭಾಷಾವರ್ಗ :**

ಈ ವರ್ಗಕ್ಕೆ ಸೇರಿದ ಭಾಷೆಗಳಲ್ಲಿ ತಮಿಳು, ಮಲಯಾಳಂ, ಕೋತ, ತೊದ, ಇರುಳ, ಕುರುಂಬ, ಮುಡುಗ ಮುಂತಾದ ಭಾಷೆಗಳಿವೆ. ಇವೆಲ್ಲವೂ ಒಂದೇ ಮೂಲಭಾಷೆಯಿಂದ ಬೆಳೆದು ಬಂದುವು. ತಮಿಳು ಅತ್ಯಂತ ಪ್ರಾಚೀನವೂ ಪ್ರಸಿದ್ಧವೂ ಆದುದು. ಸಂಸ್ಕೃತವನ್ನು ಬಿಟ್ಟರೆ ಭಾರತೀಯ ಭಾಷೆಗಳಲ್ಲಿ ತಮಿಳು ಅತ್ಯಂತ ಪ್ರಾಚೀನವಾದುದು. ಇದನ್ನು ತಮಿಳು ನಾಡಿನಲ್ಲಿ ಮಾತ್ರವಲ್ಲದೆ ಭಾರತದ ಹೊರಗೂ ಬರ್ಮ, ಶ್ರೀಲಂಕಾ, ಇಂಡೋನೇಷ್ಯ, ದಕ್ಷಿಣ ಆಫ್ರಿಕ, ಚೀನಾ, ವಿಯತ್ನಾಮ್, ಲಕ್ಷದ್ವೀಪ, ಜಾವ, ಜಮೈಕ, ಮಡಗಾಸ್ಕರ್, ಮಲೇಷಿಯಾ, ಫಿಜಿ ಇವುಗಳಲ್ಲೂ ಸಾವಿರಾರು ತಮಿಳರು ಮಾತನಾಡುತ್ತಾರೆ. ಪ್ರಾಚೀನ ಸಂಸ್ಕೃತ ವಿದ್ವಾಂಸರು ಇದನ್ನು ದ್ರಾವಿಡ ಎಂದು ಕರೆಯುತ್ತಿದ್ದರು. ದ್ರಾವಿಡವೇ ದ್ರಾವಿಳ, ದ್ರಾವಿಡ ಎಂಬ ರೂಪವನ್ನು ಪಡೆದಿದೆ ಎನ್ನುತ್ತಾರೆ.

ಕ್ರಿ.ಶ. ಒಂದನೇ ಶತಮಾನಕ್ಕೆ ಸೇರಿದ ಶಿಲಾಶಾಸನವು ಮಧುರೆಯ ಬಳಿ ದೊರೆತಿದೆ. ಕ್ರಿ.ಶ. ೪೫೦ ರಿಂದ ತಮಿಳು ಸಾಹಿತ್ಯ ತೋಲ್‌ಕಾಪ್ಪಿಯಂ ಎಂಬ ವ್ಯಾಕರಣ ಗ್ರಂಥದಿಂದ ಪ್ರಾರಂಭವಾಗುತ್ತದೆ.

ನೀಲಗಿರಿ ಬೆಟ್ಟಕಾಡುಗಳ ಸುತ್ತಮುತ್ತ ಸಾವಿರಾರು ಜನರು ಕೋತ ಭಾಷೆಯನ್ನು ಆಡುತ್ತಾರೆ. ಸಾವಿರ ಸಂಖ್ಯೆಗಳಲ್ಲಿ ತೊದ, ಇರುಳ, ಕುರುಂಬ ಭಾಷೆಗಳನ್ನು ಆಡುವವರು ಇದ್ದಾರೆ. ಪಣಿಯ, ಕಸಬ, ಕೈಕಡಿ, ಮಲೈಕುಡಿ, ಯರವ ಮುಂತಾದ ಭಾಷೆಗಳನ್ನು ಆಡುವವರು ಕಡಿಮೆ ಸಂಖ್ಯೆಯಲ್ಲಿ ಸಿಗುತ್ತಾರೆ.

ಮಲಯಾಳಂ ಕೇರಳ ರಾಜ್ಯದ ಅಧಿಕೃತ ಭಾಷೆಯಾಗಿದೆ. ಇದನ್ನು ತಮಿಳಿನ ಉಪಭಾಷೆ ಎನ್ನುತ್ತಾರೆ. ಸುಮಾರು ೧೦ನೇ ಶತಮಾನದ ವೇಳೆಗೆ ತಮಿಳು ಭಾಷೆಯಿಂದ ಪ್ರತ್ಯೇಕಗೊಂಡು ಬೆಳೆದು ಬಂದಿದೆಯೆಂದು ಹೇಳುತ್ತಾರೆ. ಮೊತ್ತಮೊದಲಿಗೆ ಕ್ರಿ.ಶ. ೮೩೦ರ ಕೊಟ್ಟಾಯಂ ಶಾಸನವು ಲಭಿಸಿದೆ. ಕ್ರಿ.ಶ. ೧೨೫೦ರಲ್ಲಿ ರಚಿತವಾದ 'ಲೀಲಾತಿಲಕಂ' ಎಂಬುದು ಮೊತ್ತಮೊದಲನೇ ಗ್ರಂಥವಾಗಿದೆ. ಮಲಯಾಳಂ ಭಾಷೆಯಲ್ಲಿ ಮುಳ್ಳುಕುರುಬ, ವೆತ್ತುವ, ನಗರಿ ಮಲಯಾಳಂ, ರೋಮನ್ ಮಲಯಾಳಂ, ನಾಯರ್ ಮಲಯಾಳಂ, ಮಾಪಿಳ್ಳೆ ಮಲಯಾಳಂ, ಅರಬ್ಬಿ ಮಲಯಾಳಂ ಎಂಬ ಉಪಭಾಷೆಗಳಿವೆ.

**ಕನ್ನಡ ಭಾಷಾ ವರ್ಗ :**

ಕರ್ನಾಟಕದ ರಾಜ್ಯ ಭಾಷೆಯಾಗಿರುವ ಕನ್ನಡದ ಬಗ್ಗೆ ಇದೇ ಘಟಕದಲ್ಲಿ ಬೇರೆ ಕಡೆ ವಿಶೇಷವಾಗಿ ಪ್ರಸ್ತಾಪಿಸಲಾಗಿದೆ. ಕನ್ನಡಕ್ಕೆ ಸೇರಿದ ಬಡಗ, ಹವ್ಯಕ, ಕೊಡಗು, ಸೋಲಿಗ, ಕಾಡುಕುರುಬ, ಜೇನುಕುರುಬ ಮುಂತಾದ ಉಪಭಾಷೆಗಳಿವೆ. ಇವು ಹಳೆಯ ಕನ್ನಡದಿಂದ ಹುಟ್ಟಿ ಬೆಳೆದ ಭಾಷೆಗಳೆಂದು ಹೇಳುತ್ತಾರೆ. ತಮಿಳುನಾಡಿನ ನೀಲಗಿರಿ ಬೆಟ್ಟದ ತಪ್ಪಲಿನಲ್ಲಿ ಕಂಡುಬರುವ ಬಡಗ ಭಾಷೆ, ಕೊಡಗಿನ ಕೊಡಗು ಭಾಷೆಗಳು ಕನ್ನಡದ ಉಪಭಾಷೆಗಳಾಗಿವೆ. ದಕ್ಷಿಣ ಕನ್ನಡ ಜಿಲ್ಲೆ, ಉತ್ತರ ಕನ್ನಡ ಜಿಲ್ಲೆಗಳಲ್ಲಿ ಹವ್ಯಕ ಕನ್ನಡವನ್ನು ಆಡುತ್ತಾರೆ. ಮೈಸೂರಿನ ಸುತ್ತಮುತ್ತಲ ಪ್ರದೇಶಗಳಲ್ಲಿ ಸೋಲಿಗ ಕನ್ನಡ, ಜೇನುಕುರುಬ ಕನ್ನಡ, ಆಡುವವರಿದ್ದಾರೆ. ಕನ್ನಡದಲ್ಲಿ ಪ್ರಾಂತಭೇದಗಳಿವೆ, ಸಾಮಾಜಿಕ ಪ್ರಭೇದಗಳಿವೆ.

**ತುಳು ಭಾಷಾವರ್ಗ :**

ದಕ್ಷಿಣ ಕನ್ನಡದ ಸುತ್ತಮುತ್ತ ತುಳು ಭಾಷೆ ಬಳಕೆಯಲ್ಲಿದೆ. ಇದನ್ನು ಕೆಲವರು ಕನ್ನಡದ ಉಪಭಾಷೆ ಎಂದು ಕರೆಯುತ್ತಾರೆ. ಇನ್ನು ಕೆಲವರು ತುಳು ಭಾಷೆಯು ಮೂಲದ್ರಾವಿಡದಿಂದ ಅಥವಾ ಮೂಲ ಕನ್ನಡದಿಂದ ಹುಟ್ಟಿ ಬೆಳೆದು ಬಂದಿದೆ ಎನ್ನುತ್ತಾರೆ. ತುಳುವಿನಲ್ಲಿ ಮೇಲ್ವರ್ಗದವರ ತುಳು, ಹಿಂದುಳಿದವರ ತುಳು ಎಂಬ ವ್ಯತ್ಯಾಸವನ್ನು ಗುರುತಿಸಲಾಗಿದೆ. ತುಳು ಲಿಪಿವಂತ ಭಾಷೆಯಲ್ಲ ಆದುದರಿಂದ ಕೆಲವರು ಕನ್ನಡ ಲಿಪಿಯಲ್ಲಿ ಬರೆಯುತ್ತಾರೆ. ಕೆಲವರು ಮಲಯಾಳಂ ಲಿಪಿಯನ್ನು ಬಳಸುವುದುಂಟು, ತುಳು ಭಾಷೆಯಲ್ಲಿಯೂ ಬೇರೆ ಬೇರೆ ಉಪಭಾಷೆಗಳಿವೆ. ಕೊರಗ ತುಳು, ಪರವ ತುಳು, ಬೆದ್ದರಿ ತುಳು, ಮಲೈಕುಡಿ ತುಳು ಮುಂತಾದುವು ಮುಖ್ಯವಾಗಿವೆ.

**ತೆಲುಗು ಭಾಷಾ ವರ್ಗ :**

ಈ ವರ್ಗದಲ್ಲಿ ತೆಲುಗು ಪ್ರಮುಖವಾದುದು. ಅದು ಆಂಧ್ರ ಪ್ರದೇಶದ ರಾಜ್ಯ ಭಾಷೆಯಾಗಿರುವುದು ನಮಗೂ ಗೊತ್ತಿದೆ. ತೆಲುಗಿನ ಮೊದಲನೆಯ ಶಾಸನ ಕ್ರಿ.ಶ. ೫೭೫ರ ಕಳಮುಳ್ಳ ಧನಂದಯನ ಶಿಲಾಶಾಸನ. ಕ್ರಿ.ಶ. ೧೧೫೦ ರಿಂದ ತೆಲುಗು ಸಾಹಿತ್ಯ ಕೃತಿಗಳು ಸಿಗುತ್ತವೆ. ತೆಲುಗು ಎಂಬ ಪದಕ್ಕೆ ಪರ್ಯಾಯವಾಗಿ ತೆಲುಂಗು, ತೆನುಂಗು, ತೆನುಗು, ತೆಲುಗ, ತ್ರಿಲಿಂಗ, ತೆಲಿಂಗ ಎಂಬ

ಪದಗಳೂ ಇವೆ. ಪೋರ್ಚುಗೀಸರು ಇದನ್ನು ಗೆಂಟೋ ಎಂದು ಕರೆಯುತ್ತಿದ್ದರು. ಈ ಭಾಷಾ ವರ್ಗದಲ್ಲಿ ಸವಾರ, ಮನ್ನೆ, ಗೊಲ್ಲ, ವಡ್ಡರಿ, ಯನದಿ, ಚೆಂಚು, ಡೊಂಬ ಇತ್ಯಾದಿ ಭಾಷೆಗಳಿವೆ.

## 1.5.2. ಮಧ್ಯ ದ್ರಾವಿಡ ಭಾಷೆಗಳು

ಈ ವರ್ಗಕ್ಕೆ ಸೇರಿದ ಭಾಷೆಗಳು ಒರಿಸ್ಸಾ, ಬಿಹಾರ, ಪ.ಬಂಗಾಳ, ಉತ್ತರ ಪ್ರದೇಶ, ಮಹಾರಾಷ್ಟ್ರ, ಅಸ್ಸಾಮ್ ಮುಂತಾದ ಕಡೆಗಳಲ್ಲಿ ಹರಡಿಕೊಂಡಿವೆ. ಇವು ಯಾವುವೂ ಲಿಪಿವಂತ ಭಾಷೆಗಳಲ್ಲ, ಲಿಖಿತ ಸಾಹಿತ್ಯ ದೊರೆಯುವುದಿಲ್ಲ. ಈ ವರ್ಗಕ್ಕೆ ಸೇರಿದ ಭಾಷೆಗಳನ್ನು ಮುಖ್ಯವಾಗಿ ಕೊಲಾಮಿ, ಪರ್ಜ ಭಾಷಾ ವರ್ಗ, ಗೋಂಡಿ-ಕೊಂಡ ಭಾಷಾವರ್ಗ ಕುವೀ-ಕುಯಿ ಭಾಷಾ ವರ್ಗ ಎಂದು ವರ್ಗೀಕರಿಸಲಾಗಿದೆ.

**ಕೊಲಾಮಿ-ಪರ್ಜಿ ಭಾಷಾವರ್ಗ :**

ಈ ವರ್ಗಕ್ಕೆ ಕೊಲಾಮಿ, ನಾಯ್ಕಿ, ಪರ್ಜಿ ಗದಬ ಮುಂತಾದ ಭಾಷೆಗಳು ಸೇರುತ್ತವೆ. ಮಹಾರಾಷ್ಟ್ರ, ಮಧ್ಯಪ್ರದೇಶ, ಭಾಂದ, ಅಮರಾವತಿ, ವಾರ್ಧಾ, ಹೈದರಬಾದ್ ಮುಂತಾದ ಕಡೆಗಳಲ್ಲಿ ಈ ಭಾಷೆಗಳನ್ನಾಡುವ ಜನರಿದ್ದಾರೆ. ನಾಯ್ಕಿ, ಕೊಲಾಮಿ ಭಾಷೆಗಳಲ್ಲಿಯೂ ಬೇರೆ ಬೇರೆ ರೂಪಗಳಿವೆ. ಗದಬ ಭಾಷೆಯನ್ನು ಹೆಚ್ಚು ಜನರು ಮಾತನಾಡುತ್ತಾರೆ. ಎಲ್ಲಾ ಭಾಷೆಗಳು ಕೊಲಾಮಿಯನ್ನು ಹೆಚ್ಚು ಹೋಲುವುದರಿಂದ ಇವು ಮೂಲ ಕೊಲಾಮಿ ಭಾಷೆಯಿಂದ ಹುಟ್ಟಿಬೆಳೆದು ಬಂದಿರಬಹುದೆಂದು ನಂಬಲಾಗಿದೆ.

**ಗೋಂಡಿ ಕೊಂಡ ಭಾಷಾ ವರ್ಗ :**

ಈ ವರ್ಗದಲ್ಲಿ ಗೋಂಡಿ, ಕೊಂಡ, ಕೊಯ, ಪೆಂಗೊ, ಮಂಡ, ದೋರ್ಲಿ ಮುಂತಾದ ಭಾಷೆಗಳಿವೆ. ಇವೆಲ್ಲವೂ ಮೂಲ ಗೋಂಡಿಯಿಂದ ಹುಟ್ಟಿರಬಹುದೆಂದು ನಂಬಲಾಗಿದೆ. ಇವುಗಳು ಆಂಧ್ರ ಪ್ರದೇಶ, ಒರಿಸ್ಸ, ಬಿಹಾರ್, ಮಧ್ಯಪ್ರದೇಶ, ಮಹಾರಾಷ್ಟ್ರ ಮುಂತಾದ ಕಡೆ ಪ್ರಚಲಿತವಾಗಿವೆ. ಗೋಂಡಿ ಭಾಷೆಯನ್ನಾಡುವವರ ಸಂಖ್ಯೆಯೇ ಜಾಸ್ತಿ. ಗೋಂಡಿಯಲ್ಲಿ ರಾಜಗೋಂಡಿ, ಮರಿಯಗೋಂಡಿ ಇತ್ಯಾದಿ ರೂಪಗಳಿವೆ.

**ಕುವೀ-ಕುಯಿ ಭಾಷಾ ವರ್ಗ:**

ಇವೆರಡೂ ಒಂದನ್ನೊಂದು ಹೋಲುತ್ತವೆ. ಒರಿಸ್ಸ ಮತ್ತು ಆಂಧ್ರಪ್ರದೇಶದ ಸುತ್ತಮುತ್ತ ಈ ಭಾಷೆಯನ್ನು ಆಡುವವರಿದ್ದಾರೆ. ಕುಯಿ ಭಾಷೆಯನ್ನು ಮಾತನಾಡುವವರನ್ನು ಕುಯಿಂಗರೆಂದೂ, ಕುವೀ ಆಡುವವರನ್ನು ಕುವಿಂಗರೆಂದು ಕರೆಯಲಾಗುತ್ತದೆ. ಇವುಗಳಲ್ಲಿಯೂ ಬೇರೆ ಬೇರೆ ಉಪಭಾಷೆಗಳಿವೆ.

## 1.5.3. ಉತ್ತರ ದ್ರಾವಿಡ ಭಾಷೆಗಳು :

ಈ ವರ್ಗಕ್ಕೆ ಸೇರಿದ ಭಾಷೆಗಳಲ್ಲಿ ಕುರುಖ್, ಮಲ್ತೊ, ಬ್ರಾಹು ಈ ಭಾಷೆಗಳು ಮುಖ್ಯವಾದುವು. ಇವುಗಳು ಭಾರತದ ಉತ್ತರ ಭಾಗದಲ್ಲಿ ಕಂಡು ಬರುತ್ತವೆ. ಕುರುಖ್-ಮಲ್ತೊ ಒಂದು ವರ್ಗವಾದರೆ, ಬ್ರಾಹು ಈ ಇನ್ನೊಂದು ವರ್ಗವಾಗುತ್ತದೆ ಕುರುಖ್-ಮಲ್ತೋ ಭಾಷಾವರ್ಗಕ್ಕೆ ಕುರುಖ್, ಮಲ್ತೊ,

ಮಲ್ತೊ, ಧಾಂಗರ್ ಮುಂತಾದುವು ಸೇರುತ್ತವೆ. ಇವು ಒಂದು ಪ್ರದೇಶದಲ್ಲಿ ನೆಲೆಯಾಗಿಲ್ಲ. ಅನೇಕ ಕಡೆ ಚದುರಿದಂತೆ ಕಂಡು ಬರುತ್ತವೆ. ಮಧ್ಯಪ್ರದೇಶ, ನೇಪಾಳ, ಮಣಿಪುರ, ಸಾಗಾಲ್ಯಾಂಡ್, ಅಸ್ಸಾಂ ಹಿಮಾಚಲ ಪ್ರದೇಶ, ಪ.ಬಂಗಾಳ ಮುಂತಾದ ಕಡೆ ಈ ಭಾಷೆಗಳನ್ನು ಮಾತನಾಡುವವರಿದ್ದಾರೆ. ಬ್ರಾಹು ಈ ಭಾಷೆಯನ್ನು ಬ್ರಾಹ್ವೀ ಎಂದೂ ಕರೆಯುತ್ತಾರೆ. ಈ ಭಾಷೆಯನ್ನು ಪಾಕಿಸ್ತಾನ, ಬಲೂಚಿಸ್ತಾನ, ಇರಾನ್, ಇರಾಕ್ ಮುಂತಾದ ಕಡೆಯೂ ಮಾತನಾಡುತ್ತಾರೆ. ಭಾರತದ ಹೊರಗೆ ಗುಡ್ಡಗಾಡು ಪ್ರದೇಶಗಳಲ್ಲಿ ಈ ಭಾಷೆಯನ್ನು ಮಾತನಾಡುವವರು ಇಸ್ಲಾಂ ಸಂಪ್ರದಾಯಕ್ಕೆ ಹೊಂದಿಕೊಂಡಿದ್ದಾರೆ. ಬ್ರಾಹ್ವೀ ಭಾಷೆಯನ್ನು ಆಡುವವರು ದ್ರಾವಿಡರು ಎಂದು ಗುರುತಿಸಲಾಗಿದೆ. ದ್ರಾವಿಡ ಭಾಷೆಯ ಅನೇಕ ಅಂಶಗಳಿರುವುದು ಕಂಡು ಬರುತ್ತದೆ. ಇದು ಪರ್ಷಿಯನ್, ಉರ್ದು, ಪಶ್ತೊ ಮುಂತಾದ ಭಾಷೆಗಳ ಪ್ರಭಾವಕ್ಕೆ ಒಳಗಾಗಿರುವುದು ಸಹಜವೇ ಆಗಿದೆ.

### 1.5.4 ದ್ರಾವಿಡ ಭಾಷಾವರ್ಗದ ಸ್ವರೂಪ ಲಕ್ಷಣಗಳು :

ದ್ರಾವಿಡ ಭಾಷಾ ಪರಿವಾರವು ಸ್ವತಂತ್ರ ಪರಿವಾರ ಎಂಬುದನ್ನು ಈಗಾಗಲೇ ತಿಳಿದಿದ್ದೇವೆ. ಹಿಂದಿ, ಬಂಗಾಳಿ, ಗುಜರಾತಿ ಇತ್ಯಾದಿಗಳಿಗೆ ಸಂಸ್ಕೃತವು ಮಾತೃ ಭಾಷೆಯಾಗಿರುವಂತೆ ಕನ್ನಡ, ತಮಿಳು ಇತ್ಯಾದಿಗಳಿಗೂ ಒಂದು ಮಾತೃ ಭಾಷೆ ಇರಲೇಬೇಕು. ಅದನ್ನು ಮೂಲ ದ್ರಾವಿಡ ಎಂದು ಕರೆಯಬಹುದು. ಈ ಮೂಲದ್ರಾವಿಡ ಭಾಷೆಯ ಸ್ವರೂಪವನ್ನು ತಿಳಿಯಲು ಆಧಾರಗಳು ದೊರೆಯುವುದಿಲ್ಲ. ಲಿಪಿಯ ದೃಷ್ಟಿಯಿಂದ ನೋಡಿದರೆ ತೆಲುಗಿಗೂ ಕನ್ನಡಕ್ಕೂ ಸಮೀಪ ಸಂಬಂಧವಿದೆ. ಶಬ್ದರೂಪ ವ್ಯಾಕರಣ ಪ್ರಕ್ರಿಯೆಗಳನ್ನು ನೋಡಿದರೆ ತಮಿಳು ಕನ್ನಡಕ್ಕೆ ಹತ್ತಿರವೆನಿಸುತ್ತದೆ.

ಭಾರತದ ಲಿಪಿಗಳಿಗೆ ಬ್ರಾಹ್ಮೀ ಲಿಪಿಯೇ ಮೂಲವೆಂದು ವಿದ್ವಾಂಸರು ಹೇಳುತ್ತಾರೆ. ದ್ರಾವಿಡ ಲಿಪಿಗಳಿಗೂ ಬ್ರಾಹ್ಮೀಲಿಪಿಯೇ ಮೂಲವಿರಬಹುದು. ಅವುಗಳು ಕಾಲಕ್ರಮೇಣ ಬದಲಾವಣೆಗಳಿಗೆ ಒಳಗಾಗಿ ಇಂದಿನ ರೂಪಗಳನ್ನು ಪಡೆದುಕೊಂಡಿರಬಹುದು. ಕನ್ನಡ ನಾಡು ಮತ್ತು ತೆಲುಗು ದೇಶಗಳನ್ನು ಒಟ್ಟಿಗೇ ಆಳುತ್ತಿದ್ದ ಅರಸರುಗಳಿಂದ ಲಿಪಿಗಳಲ್ಲಿ ಸಾಮ್ಯ ಉಂಟಾಗಿರಬಹುದು. ತಮಿಳು ಲಿಪಿಯು ಇವೆರಡಕ್ಕಿಂತ ಭಿನ್ನವಾಗಿದೆ. ಶಬ್ದರೂಪಗಳಲ್ಲಿ ವ್ಯಾಕರಣ ಪ್ರಕ್ರಿಯೆಗಳಲ್ಲಿ ಈಗ ಹೋಲಿಕೆ ಕಡಿಮೆಯಾಗಿದೆ. ಹಳಗನ್ನಡದಲ್ಲಿ ಹೋಲಿಕೆ ಸ್ಫುಟವಾಗಿದೆ. ಪೂರ್ವದ ಹಳಗನ್ನಡವನ್ನು ನೋಡಿದರೆ ಈ ಹೋಲಿಕೆಯು ಇನ್ನು ಹೆಚ್ಚುತ್ತದೆ. ಭಾಷೆಗಳ ಸಂಬಂಧವನ್ನು ನಿರ್ಣಯಿಸಲು ಲಿಪಿ ಸಾದೃಶ್ಯಕ್ಕಿಂತಲೂ ಶಬ್ದರೂಪ, ವ್ಯಾಕರಣ ಪ್ರಕ್ರಿಯೆಗಳು ಮುಖ್ಯವಾಗುತ್ತವೆ. ಈ ಆಧಾರದ ಮೇಲೆ ನೋಡಿದರೆ ತಮಿಳು ಮಲಯಾಳಕ್ಕೂ ತುಂಬಾ ಹೋಲಿಕೆ ಇದೆ. ಭಾಷಾ ವಿಜ್ಞಾನಿಗಳು ಹೇಳುವಂತೆ ತಮಿಳಿನಿಂದ ಮಲಯಾಳಂ ಹುಟ್ಟಿದೆ. ಆದ್ದರಿಂದ ಅವೆರಡಕ್ಕೂ ಹೋಲಿಕೆ ಕಂಡುಬರುತ್ತದೆ. ಮೂಲದ್ರಾವಿಡದಿಂದ ಮೊದಲು ಪ್ರತ್ಯೇಕವಾದುದು ತೆಲುಗು ಎಂದು ಊಹಿಸಲಾಗಿದೆ. ಅನಂತರ ತಮಿಳು ಕನ್ನಡಗಳು ಕವಲೊಡೆದು, ಅನಂತರ ತಮಿಳಿನಿಂದ ಮಲಯಾಳಂ ಹುಟ್ಟಿತೆಂದು ಹೇಳಲಾಗಿದೆ. ಇದನ್ನು ರೇಖಾರೂಪದಲ್ಲಿ ಹೀಗೆ ತೋರಿಸಲಾಗಿದೆ.




ನಾವು ಇದುವರೆಗೆ ನೋಡಿದ ದ್ರಾವಿಡ ಭಾಷೆಗಳಲ್ಲಿ ತಮಿಳು, ಕನ್ನಡ, ತೆಲುಗು, ಮಲಯಾಳಂ ಭಾಷೆಗಳು ಸಮಗ್ರವಾಗಿ ಸಮೃದ್ಧ ಭಾಷೆಗಳಾಗಿವೆ. ಅವು ಎಲ್ಲ ಬಗೆಯ ಜಾಗತಿಕ ಸವಾಲುಗಳನ್ನು ಎದುರಿಸಿ ನಿಲ್ಲಬಲ್ಲುವಾಗಿವೆ. ಸಾಂಸ್ಕೃತಿಕವಾಗಿ ಪ್ರಪಂಚದ ಮುಂದುವರಿದ ಭಾಷೆಗಳಿಗೆ ಸರಿಸಮವಾಗಿ ನಿಲ್ಲುವಂಥವಾಗಿವೆ. ಅವು ಜಾಗ್ರತ ಭಾಷೆಗಳಾಗಿ ಜೀವಂತಿಕೆಯನ್ನು ಪ್ರಕಟಿಸುತ್ತ ಪ್ರಪಂಚದ ವೇಗವಾದ ಬದಲಾವಣೆಯ ಜೊತೆಯಲ್ಲಿ ಸ್ಪಂದಿಸಬಲ್ಲುವಾಗಿವೆ. ಯಾವುದೇ ಜ್ಞಾನವನ್ನು ಹೀರಿಕೊಳ್ಳಬಲ್ಲುವಾಗಿವೆ.

ಇವುಗಳ ಧ್ವನಿ ವ್ಯವಸ್ಥೆಯು ಮೂಲ ದ್ರಾವಿಡ ಧ್ವನಿ ವ್ಯವಸ್ಥೆಯನ್ನು ಹೋಲುತ್ತವೆಂದು ಭಾಷಾವಿಜ್ಞಾನಿಗಳು ಹೇಳುತ್ತಾರೆ. ಅವುಗಳಲ್ಲಿ ಸಾಮಾನ್ಯವಾಗಿ ಇದ್ದ ಧ್ವನಿಗಳ ಜೊತೆಗೆ ಹೊಸ ಧ್ವನಿಗಳು ಸೇರಿಕೊಂಡಿವೆ. ಮೂಲದ್ರಾವಿಡ ಭಾಷೆಯಲ್ಲಿ ಅ, ಇ, ಉ, ಎ, ಒ ಎಂಬ ಐದು ಹ್ರಸ್ವ ಸ್ವರಗಳು ಮಾತ್ರ ಇದ್ದುವೆಂದು ಕೆಲವರು, ದೀರ್ಘಸ್ವರಗಳೂ ಇದ್ದುವೆಂದೂ ಇನ್ನು ಕೆಲವರು ಹೇಳುತ್ತಾರೆ. ಮೊದಲು ಐದು ಹ್ರಸ್ವ ಸ್ವರಗಳು ಇದ್ದು ಅನಂತರ ದೀರ್ಘ ಸ್ವರಗಳು ಸೇರಿಬಹುದು. ವ್ಯಂಜನಗಳಲ್ಲಿ ಕೆಲವು ಬೇರೆ ಬೇರೆ ಭಾಷೆಗಳಿಂದ ಪ್ರಭಾವಿತವಾಗಿವೆ. ಒಟ್ಟಾರೆ ಮೂಲದ್ರಾವಿಡ ಭಾಷೆಗಿಂತ ಹೆಚ್ಚು ವ್ಯಂಜನ ಧ್ವನಿಮಾಗಳಿರುವುದು ಕಂಡುಬರುತ್ತದೆ.

ದ್ರಾವಿಡ ಭಾಷೆಗಳಲ್ಲಿ ಪ್ರಾರಂಭದಲ್ಲಿ ಒತ್ತಕ್ಷರಗಳಿಲ್ಲ, ಮಹಾಪ್ರಾಣಗಳಿಲ್ಲ, ಮೂರ್ಧನ್ಯ ಧ್ವನಿಮಾಗಳು ಹೆಚ್ಚು ಇವೆ. ಆಡುಮಾತಿನಲ್ಲಿ ಕಾಣದ ಮಹಾಪ್ರಾಣಗಳು, ಪ್ರಾರಂಭದ ಒತ್ತಕ್ಷರಗಳು ಸಂಸ್ಕೃತದಿಂದ ಬಂದಿವೆ, ಎನ್ನುವುದು ಆಧಾರ ಪೂರ್ವಕವಾಗಿಯೇ ಇದೆ. ಮೂರ್ಧನ್ಯ ಧ್ವನಿಮಾಗಳೆಂದರೆ ಟ ವರ್ಗದ ವರ್ಣಗಳು, ರಾಜಶೇಖರ ಎಂಬ ಮೀಮಾಂಸಕನು (೯೦೦) ಕನ್ನಡಿಗರ ಬಗ್ಗೆ ಹೇಳುತ್ತಾ 'ಟಂಕಾರೋತ್ಕರ ಪಾಠಿನಃ' ಎನ್ನುತ್ತಾನೆ. ಆತನ ಪ್ರಕಾರ ಕನ್ನಡಿಗರು 'ಟ' ಕಾರ ಶಬ್ದಗಳಿಗೆ ಪ್ರಾಶಸ್ತ್ಯ ಕೊಡುತ್ತಾರೆ ಎಂದಿರಬೇಕು. ಕೆಲವರು ಬೇರೆ ಅರ್ಥವನ್ನು ಶೋಧಿಸಿದ್ದಾರೆ. ಅವರ ಪ್ರಕಾರ ಕನ್ನಡಿಗರು ಠೇಂಕಾರದಿಂದ ಮಾತನಾಡುತ್ತಾರೆ ಎಂಬುದು. ಇದರ ಅರ್ಥ ಅಹಂಕಾರವೋ, ಸ್ವಾಭಿಮಾನವೋ ಎಂಬುದು ಗೊತ್ತಾಗುವುದಿಲ್ಲ ಎಂದು ಕೆಲವರು ತರ್ಕಿಸಿದ್ದಾರೆ. ಈ ಮೂರ್ಧನ್ಯ ಧ್ವನಿಮಾಗಳು ಕೆಲವು ಉತ್ತರ ದ್ರಾವಿಡ ಭಾಷೆಗಳಲ್ಲಿ ಹಾಗೂ ಕೆಲವು ಮಧ್ಯದ್ರಾವಿಡ ಭಾಷೆಗಳಲ್ಲಿ ಪರಿವರ್ತನೆ ಹೊಂದಿ ಬಳಕೆಯಲ್ಲಿವೆ. ದ್ರಾವಿಡ ಭಾಷೆಗಳು ಬಹಳ ಹಿಂದಿನಿಂದಲೂ ಸಂಸ್ಕೃತ ಪ್ರಾಕೃತ ಭಾಷೆಗಳ ಪ್ರಭಾವಕ್ಕೆ ಒಳಗಾಗಿವೆ. ಸಂಸ್ಕೃತವೂ ದ್ರಾವಿಡ ಭಾಷೆಗಳಿಂದ ಶಬ್ದಗಳನ್ನು ಸ್ವೀಕರಿಸಿದೆ. ಕುಂತಲಿ (ಕೂಂದಲ್), ತಟಿತ್ (ತೆಡಿಲ್), ಖಲೀನ (ಕಡಿಯಾಣ), ತಲ್ಪ (ತೆಪ್ಪ), ಕುಟಿ (ಗುಡಿಸಲ್) ಮುಂತಾದ ಶಬ್ದಗಳು ಸಂಸ್ಕೃತಕ್ಕೆ ಸೇರ್ಪಡೆಯಾಗಿವೆ ಎಂದು ವಿದ್ವಾಂಸರು ಹೇಳುತ್ತಾರೆ.

ದ್ರಾವಿಡ ಭಾಷೆಗಳಲ್ಲಿ ಬಹು ಅಕ್ಷರಗಳ ಶಬ್ದಗಳು ಕಡಿಮೆ. ಒಂದು ಅಕ್ಷರದ ಶಬ್ದಗಳೇ ಹೆಚ್ಚು. ಬಾ, ಪೋ, ಮೀ, ಬೇ, ತಿನ್, ಕೊಲ್ ಇತ್ಯಾದಿಗಳನ್ನು ನೋಡಬಹುದು. ಮೂರು ಅಕ್ಷರಗಳಿರುವ ಶಬ್ದಗಳು ನಂತರ ಬೆಳೆದು ಬಂದಂತಹವು. ದ್ರಾವಿಡ ಭಾಷೆಗಳಲ್ಲಿ ಪ್ರಕೃತಿಗೆ ಪ್ರತ್ಯಯವನ್ನು ಜೋಡಿಸಿ ಹೊಸ ಪದಗಳನ್ನು ಸೃಷ್ಟಿಸಲಾಗುತ್ತದೆ. ಆದ್ದರಿಂದ ದ್ರಾವಿಡ ಭಾಷೆಗಳು ಪ್ರತ್ಯಯ ಪ್ರಧಾನ ಭಾಷೆಗಳು. ಇನ್ನು ವಚನ ವಿಚಾರವನ್ನು ಪರಿಶೀಲಿಸಿದರೆ ಏಕ ಮತ್ತು ಬಹು ವಚನಗಳು ಮಾತ್ರ ಇವೆ. ಲಿಂಗವಿವಕ್ಷೆಯನ್ನು ನೋಡಿದರೆ ಮೂರು ಲಿಂಗಗಳಿರುವುದು ಕಂಡುಬರುತ್ತದೆ. ವಿಭಕ್ತಿ ಪ್ರತ್ಯಯಗಳು ಏಳು ವಿಧವಾಗಿವೆ. ಸಂಸ್ಕೃತದಲ್ಲಿರುವ ವಚನ, ಲಿಂಗ ಮುಂತಾದ ವಿಷಯಗಳಿಗೂ ಈ ಭಾಷೆಗಳಿಗೂ ತುಂಬಾ ವ್ಯತ್ಯಾಸವಿದೆ. ಸಾಮಾನ್ಯವಾಗಿ ನಾಮಪದಗಳು ಲಿಂಗ, ವಚನ, ವಿಭಕ್ತಿಗಳನ್ನು ತೆಗೆದುಕೊಳ್ಳುತ್ತವೆ. ಕ್ರಿಯಾಪದಗಳು ಕಾಲ ಸೂಚಕ, ಅರ್ಥ ಸೂಚಕ ಪ್ರತ್ಯಯಗಳನ್ನು ತೆಗೆದುಕೊಳ್ಳುತ್ತವೆ. ದ್ರಾವಿಡ ಭಾಷೆಗಳಲ್ಲಿ ಕೆಲವು ಮೂರು ವಿಧದ ಕಾಲಸೂಚಕ ಪ್ರತ್ಯಯಗಳಿದ್ದರೆ, ಕೆಲವದರಲ್ಲಿ ಎರಡು ರೀತಿಯವು ಮಾತ್ರ ಇವೆ. ಸರ್ವನಾಮಗಳನ್ನು ನೋಡಿದಾಗ ಉತ್ತಮ ಪುರುಷ ಮತ್ತು ಮಧ್ಯಮ ಪುರುಷಗಳಲ್ಲಿ ಲಿಂಗ ಭೇದ ಕಂಡುಬರುವುದಿಲ್ಲ. ಆದರೆ ವಚನ ಭೇದ ಕಂಡು ಬರುತ್ತದೆ. ಹಳಗನ್ನಡ, ತಮಿಳು ಭಾಷೆಗಳಲ್ಲಿ ಕೆಲವು ಪದಗಳು ಕ್ರಿಯಾಪದವಾಗಿಯೂ ಮತ್ತು ನಾಮಪದವಾಗಿಯೂ ಕೆಲಸ ಮಾಡುತ್ತವೆ. ಕರ್ಮಣಿ ಪ್ರಯೋಗವು ಕಂಡು ಬರುವುದಿಲ್ಲ. ಇದ್ದರೆ ಬೇರೆ ಭಾಷೆಗಳ ಪ್ರಭಾವದಿಂದ ಕೃತಕವಾಗಿ ಉಂಟಾಗಿರಬಹುದು.

## 1.6 ಸ್ವಪರೀಕ್ಷಾ ಪ್ರಶ್ನೆಗಳು

೧. ಮೂರುವರೆ ಭಾಷೆಗಳು ಎಂದರೇನು?

..............................................................................................

..............................................................................................

೨. ಧ್ವನ್ಯಂಗಗಳು ಯಾವುವು?

..............................................................................................

..............................................................................................

೩. ಊಷ್ಮಧ್ವನಿಗಳು ಯಾವುವು?

..............................................................................................

..............................................................................................

..............................................................................................

೪. ಯಾದೃಚ್ಛಿಕ ಧ್ವನಿ ಸಂಕೇತಗಳು ಎಂದರೇನು?

..........................................................................................

..........................................................................................

೫. ಮಾತೃಭಾಷೆ ಮನುಷ್ಯನಿಗೆ ತನ್ನಷ್ಟಕ್ಕೆ ತಾನೆ ಬರುತ್ತದೆಯೆ?

..........................................................................................

..........................................................................................

೬. ಮೃತ್ಯಭಾಷೆ ಎಂದರೇನು?

..........................................................................................

..........................................................................................

೭. ಜಾನಾಂಗಿಕ ವರ್ಗೀಕರಣ ಎಂದರೇನು?

..........................................................................................

..........................................................................................

೮. ಕನ್ನಡವು ಯಾವ ಭಾಷಾ ಪರಿವಾರಕ್ಕೆ ಸೇರಿದೆ?

..........................................................................................

..........................................................................................

೯. ಜ್ಞಾತಿ ಭಾಷೆಗಳು ಎಂದರೇನು?

..........................................................................................

..........................................................................................

೧೦. ಚಾಕ್ಷುಷ ಭಾಷೆ ಮತ್ತು ಶ್ರಾವಣ ಭಾಷೆ ಎಂದರೇನು?

..........................................................................................

..........................................................................................

## 1.7 ಸ್ವಪರೀಕ್ಷಾ ಪ್ರಶ್ನೆಗಳಿಗೆ ಉತ್ತರಗಳು

೧. ಭಾರತದಲ್ಲಿ ಹಿಂದೆ ಸಂಬಿದ್ದಂತೆ ಸಂಸ್ಕೃತ, ಪ್ರಾಕೃತ, ಅಪಭ್ರಂಶ ಹಾಗೂ-ಪೈಶಾಚಿ ಸೇರಿ ಮೂರುವರೆ ಭಾಷೆಗಳು ಪ್ರಪಂಚದ ಎಲ್ಲಾ ಭಾಷೆಗಳಿಗೂ ಮೂಲ.

೨. ಕಂಠ, ತಾಲು, ಮೂರ್ಧನ್, ದಂತ, ಓಷ್ಠ, ನಾಸಿಕ, ನಾಲಿಗೆ, ಮುಖ್ಯವಾದುವು.

೩. ಸ, ಶ, ಷ ಗಳನ್ನು ಊಷ್ಮಧ್ವನಿಗಳು ಎನ್ನುತ್ತಾರೆ.

೪. ಸೀಮಿತವಾದ ಅಗತ್ಯವನ್ನು ಪೂರೈಸುವ ಧ್ವನಿ ಸಂಕೇತಗಳು.

೫. ಮಾತೃಭಾಷೆ ಅಥವಾ ಮನೆಯ ಭಾಷೆಯು ಕೂಡ ಕಲಿಯದೆ ಬರುವುದಿಲ್ಲ.

೬. ಒಂದು ಕಾಲದಲ್ಲಿ ಬಳಕೆಯಲ್ಲಿದ್ದು ಕಾರಣಾಂತರದಿಂದ ಇಂದು ಚಲಾವಣೆಯಲ್ಲಿ ಇಲ್ಲದ ಭಾಷೆ.

೭. ಒಂದು ಜನಾಂಗದವರು ಎಲ್ಲೇ ನೆಲಸಿರಲಿ ಅವರೆಲ್ಲರೂ ಒಂದೇ ಭಾಷಾ ಪರಿವಾರದ ಭಾಷೆಯನ್ನು ಮಾತನಾಡುತ್ತಾರೆಂದು ತಿಳಿದು ಅವುಗಳನ್ನು ವರ್ಗೀಕರಿಸುವ ವಿಧಾನ.

೮. ಕನ್ನಡವು ದ್ರಾವಿಡ ಭಾಷಾ ಪರಿವಾರಕ್ಕೆ ಸೇರಿದೆ.

೯. ಒಂದಕ್ಕೊಂದು ಸಂಬಂಧವಿರುವ, ಸಾಮ್ಯತೆ ಕಂಡುಬರುವ ಭಾಷೆಗಳು.

೧೦. ಚಾಕ್ಷುಷ ಎಂದರೆ ಕಣ್ಣಿಗೆ ಕಾಣುವ(ಂತೆ) ಬರೆಯ ಬಹುದಾದದ್ದು. ಶ್ರಾವಣ ಎಂದರೆ ಕಿವಿಗೆ ಮಾತ್ರ ಕೇಳಿಸುವ, ಬರಹಕ್ಕೆ ಇಳಿಯದಿರುವುದು.

## 1.8 ಹೆಚ್ಚಿನ ಓದಿಗೆ

೧. ಕನ್ನಡ ಕೈಪಿಡಿ - ಸಂ-೧ ಮೈಸೂರು ವಿ.ವಿ.
೨. ವರ್ಣನಾತ್ಮಕ ಭಾಷಾ ವಿಜ್ಞಾನ - ಜಿ. ಎಸ್. ಕುಳ್ಳಿ
೩. ದ್ರಾವಿಡ ಭಾಷಾ ವಿಜ್ಞಾನ - ಹಂಪ ನಾಗರಾಜಯ್ಯ
೪. ಕರ್ನಾಟಕ ವಿಷಯ ವಿಶ್ವಕೋಶ - ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು.
೫. ಕನ್ನಡ ಸಾಹಿತ್ಯ ಚರಿತ್ರೆ - ರಂ.ಶ್ರೀ. ಮುಗಳಿ.

## ಘಟಕ - 2

## ಕನ್ನಡ, ಕರ್ನಾಟಕ ಶಬ್ದ ನಿಷ್ಪತ್ತಿ, ಕನ್ನಡ ಸಂಸ್ಕೃತ ಸಂಬಂಧ ಕನ್ನಡ ಭಾಷೆಯ ವಿವಿಧ ಹಂತಗಳು, ಪ್ರಾಂತ ಭೇದಗಳು

ಪರಿವಿಡಿ :

## 2.0 ಉದ್ದೇಶ

- ಕನ್ನಡ ಎನ್ನುವ ಶಬ್ದವು ಹೇಗೆ ಬಂತು, ಕರ್ನಾಟಕ ಎಂಬ ಶಬ್ದವು ಹೇಗೆ ರೂಪತಾಳಿತು ಎಂಬುದನ್ನು ತಿಳಿಯುವುದು.
- ಕನ್ನಡ ಮತ್ತು ಕರ್ನಾಟಕ ಎಂಬ ಶಬ್ದಗಳು ಒಂದೇ ಅರ್ಥವನ್ನು ಕೊಡುತ್ತವೆಯೆ. ಅವುಗಳು ಉಗಮದಿಂದಲೂ ಭಿನ್ನವಾಗಿವೆಯೋ, ಸಮಾನಾರ್ಥಕವಾಗಿವೆಯೋ ಎಂಬುದನ್ನು ಪರಿಶೀಲಿಸುವುದು.
- ಕನ್ನಡ ನಾಡು, ನುಡಿಗಳು ಎಷ್ಟು ಪ್ರಾಚೀನವಾದುವು ಎಂಬುದನ್ನು ತಿಳಿಯುವುದು.
- ಸಂಸ್ಕೃತ ಮತ್ತು ಕನ್ನಡ ಭಾಷೆಗಳಿಗೆ ಇರುವ ಪರಸ್ಪರ ಸಂಬಂಧವನ್ನು ಅರ್ಥಮಾಡಿಕೊಳ್ಳುವುದು.
- ಕನ್ನಡ ಭಾಷೆಯ ಇತಿಹಾಸವನ್ನು ಗಮನಿಸಿ ಅದರ ಬೆಳವಣಿಗೆಯ ವಿವಿಧ ಹಂತಗಳನ್ನು ಪ್ರತ್ಯೇಕಿಸಿ ನೋಡುವುದು.
- ಕನ್ನಡದಲ್ಲಿ ಕಂಡುಬರುವ ಪ್ರಾಂತಭೇದಗಳನ್ನು ಪರಿಶೀಲಿಸುವುದು ಇತ್ಯಾದಿಗಳನ್ನು ಈ ಘಟಕದಲ್ಲಿ ನೋಡಬಹುದು.

## 2.1 ಪೀಠಿಕೆ

ಪ್ರತಿಯೊಂದು ಭಾಷೆಗೂ ಇತಿಹಾಸವಿದೆ. ಆದರೆ ಆಡು ಭಾಷೆಗಳಿಗೆ ಲಿಪಿರಹಿತಗಳಿಗೆ ಇತಿಹಾಸ ಇರಬಹುದಾದರೂ ಅದಕ್ಕೆ ಸಾಕ್ಷಿ ಪುರಾವೆಗಳೂ ಇವೆ. ಭಾಷೆಯು ಧರ್ಮದ (ಮತ) ಹಾಗೆ ಆತ್ಮೀಯತೆಯನ್ನು ಬೆಳೆಸುತ್ತದೆ ಮತ್ತು ಘರ್ಷಣೆಯನ್ನೂ ಉಂಟುಮಾಡುತ್ತದೆ. ಮತಧರ್ಮದ ಹಾಗೆ ಭಾಷೆಯೂ ಕೂಡ ಮನುಷ್ಯರ ಭಾವನೆಗಳ ಮೇಲೆ ಕೆಲಸ ಮಾಡುತ್ತದೆ. ಒಬ್ಬರ ಭಾಷೆಯನ್ನು ಹೊಗಳುವುದು ಮತ್ತು ತೆಗಳುವುದು ಎರಡು ಕಾರ್ಯಗಳಿಂದಲೂ ಪರಿಣಾಮಗಳು ಸೃಷ್ಟಿಯಾಗುತ್ತವೆ. ಸಂಸ್ಕೃತ ಎಂದು ಹೇಳಿದ ಕೂಡಲೇ ಜನರು ತತ್ತ್ವಜ್ಞಾನ, ಸುಭಾಷಿತ ಕಲ್ಪನೆಯನ್ನು ಮಾಡುತ್ತಾರೆ. ಇಂಗ್ಲಿಷ್ ಎಂದು ಹೇಳಿದಾಗ ಕಂಪ್ಯೂಟರ್, ಐ.ಟಿ. ಮುಂತಾದ ಕಲ್ಪನೆಗಳನ್ನು ಮಾಡುತ್ತಾರೆ. ಆದರೆ ಭಾಷೆ ಎಂಬುದು ಸಿಪ್ಪೆಯಂತೆ ಮಾತ್ರ ಕೆಲಸ ಮಾಡುತ್ತದೆಂದು ಭಾಷಾ ವಿಜ್ಞಾನಿಗಳು ಹೇಳುತ್ತಾರೆ. ಒಂದು ಭಾಷೆಗೆ ಸಂಬಂಧಿಸಿದ ವಿಚಾರಗಳು ಎಷ್ಟೋ ಇರುತ್ತವೆ. ಅವುಗಳನ್ನು ಸಂಪೂರ್ಣವಾಗಿ ಬಿಡಿಸಿ ನೋಡಿದಾಗ ವೈಜ್ಞಾನಿಕವಾಗಿ ಪರಿಶೀಲಿಸಿದಾಗ ಎಷ್ಟೋ ಕುರುಡು ನಂಬಿಕೆಗಳು ಮಾಯವಾಗುತ್ತವೆ. ಎಲ್ಲ ಭಾಷೆಗಳೂ ಸಮಾನ, ಎಲ್ಲವೂ ಸರಸ್ವತಿಯ ವಾಣಿಯಲ್ಲದೆ ಬೇರೆ ಅಲ್ಲ ಎಂಬ ತಿಳಿವಳಿಕೆ ಉಂಟಾಗುತ್ತದೆ. ಭಾಷೆಯ ಹುಟ್ಟು, ಬೆಳವಣಿಗೆ, ಸಂಪರ್ಕ, ಸಂಬಂಧ ಮತ್ತು ಇತರ ವಿಚಾರಗಳೆಲ್ಲವೂ ಭಾಷೆಯ ಅಧ್ಯಯನದಿಂದ ಗೊತ್ತಾಗುತ್ತವೆ. ದೇವಭಾಷೆ, ಸಾಮಾನ್ಯ ಭಾಷೆ, ಕೀಳುಭಾಷೆ ಎಂದು ವಿಭಜಿಸಿ ನೋಡುವುದನ್ನು ಬಿಟ್ಟುಬಿಡುತ್ತವೆ. ಆದರೂ ಕೂಡ ಅನಾಗರಿಕ ಜನರ ಭಾಷೆಯು ಅನಾಗರಿಕವಾಗಿಯೂ, ಸುಸಂಸ್ಕೃತರ ಭಾಷೆಯು ಸುಸಂಸ್ಕೃತವಾಗಿಯೂ ಕಂಡು ಬಂದರೆ ಆಶ್ಚರ್ಯ ಪಡಬೇಕಾಗಿಲ್ಲ ಏಕೆಂದರೆ ಭಾಷೆಯನ್ನು ಮನುಷ್ಯನೇ ಸೃಷ್ಟಿಸಿರುತ್ತಾನೆ ಬೆಳೆಸಿರುತ್ತಾನೆ. ಇಲ್ಲಿ ಕನ್ನಡಕ್ಕೆ ಸಂಬಂಧಿಸಿದ ಎಲ್ಲ ವಿಚಾರಗಳನ್ನು ಪರಿಶೀಲಿಸಲಾಗಿದೆ.

## 2.2 ಕನ್ನಡ, ಕರ್ನಾಟಕ ಶಬ್ದಗಳ ನಿಷ್ಪತ್ತಿ

ಕನ್ನಡ, ಕರ್ನಾಟ, ಕರ್ನಾಟಕ ಎಂಬ ಶಬ್ದಗಳನ್ನು ನೋಡಿದರೆ ಭಾಷೆ ಮತ್ತು ದೇಶ ಎರಡೂ ಮನಸ್ಸಿಗೆ ಬರುತ್ತವೆ. ಕೆಲವು ದೇಶಗಳ ಹೆಸರು ಮತ್ತು ಅವುಗಳ ಭಾಷೆಗಳ ಹೆಸರು ಒಂದನ್ನೊಂದು ಅನುಸರಿಸಿಕೊಂಡೇ ಇರುವುದನ್ನು ಕಾಣಬಹುದು. ಉದಾಹರಣೆಗೆ ಇಂಗ್ಲೆಂಡ್-ಇಂಗ್ಲಿಷ್, ಫ್ರಾನ್ಸ್-ಫ್ರೆಂಚ್, ಜರ್ಮನಿ-ಜರ್ಮನ್ ಇತ್ಯಾದಿ. ಮೊದಲು ದೇಶ ಹುಟ್ಟಿತೋ ಅಥವಾ ಭಾಷೆಯಿಂದ ದೇಶಕ್ಕೆ ಹೆಸರು ಬಂದಿತೋ ಎಂಬುದು ಚರ್ಚಾರ್ಹವಾದ ವಿಚಾರವಾಗಿದೆ. ಕರ್ನಾಟ ಎಂಬುದು ದೇಶವಾದರೆ ಕನ್ನಡ ಎಂಬುದು ಭಾಷೆಯಾಗುತ್ತದೆ. ಕರ್ನಾಟ-ಕನ್ನಡ ಎಂಬುದಾಗಿ ಹೇಳುವುದು ಸುಲಭವಲ್ಲ. ಏಕೆಂದರೆ ಕನ್ನಡವೆಂದರೂ ಕೂಡ ದೇಶದ ಹೆಸರನ್ನೇ ಸೂಚಿಸುತ್ತದೆ ಎಂಬ ವಾದವೂ ಇದೆ.

'ಶಬ್ದರತ್ನಾವಲಿ' ಎಂಬ ಗ್ರಂಥದ ಪ್ರಕಾರ 'ಕರ್ಣೇಷು ಅಟತಿ ಇತಿ ಕರ್ನಾಟಃ' (ಕಿವಿಯನ್ನು ಆಕ್ರಮಿಸಿ ತುಂಬಿಕೊಂಡಿರುವ ಶಬ್ದ) ಎಂದು ತಿಳಿದು ಬರುತ್ತದೆ. ಒಂದು ದೇಶದ ಕೀರ್ತಿಯು ಕಿವಿಯನ್ನು ತುಂಬುವುದೆಂದರೆ ಅದು ಪ್ರಸಿದ್ಧವಾಗಿತ್ತು ಎಂದು ಹೇಳಬಹುದು. 'ಸ್ಕಂದಪುರಾಣ' ದಲ್ಲಿ ಒಂದು ಕಥೆಯು ಉಕ್ತವಾಗಿದೆ. ಅದರ ಪ್ರಕಾರ ಕರ್ನಾಟ ಎಂಬ ಹೆಸರಿನ ರಾಕ್ಷಸನು ಇಲ್ಲಿ ರಾಜ್ಯಭಾರ ನಡೆಸುತ್ತಿದ್ದನು. ಆದರೆ ರಾಕ್ಷಸರು ದೀರ್ಘಾಯುಸ್ಸನ್ನು ಹೊಂದಿರಲಾರರು. ಏಕೆಂದರೆ ಅವರಿಗೆ ಶತ್ರುಗಳು ಜಾಸ್ತಿ. ಕರ್ನಾಟನು ಒಂದು ಕಾಲಕ್ಕೆ ನಷ್ಟ ಹೊಂದಿದ. ಈ ರಾಕ್ಷಸನಿಂದಾಗಿ ಈ ನಾಡಿಗೆ ಕರ್ನಾಟ ಎಂಬ ಹೆಸರು ಬಂದಿತು ಎಂಬ ಐತಿಹ್ಯವಿದೆ. ವಿಶ್ವಗುಣಾದರ್ಶ ಎಂಬ ಗ್ರಂಥದ ಕರ್ತೃ ವೆಂಕಟಾಧ್ವರಿಯು 'ಕರ್ನಾಟ ದೇಶೋಯಃ ಪೂರ್ವ ಕರ್ಣದೇಶಮ ಭೂಯತ್.......' ಎಂದು ಹೇಳಿದ್ದಾನೆ. ಅದರ ತಾತ್ಪರ್ಯವೂ ಕೂಡ ಪ್ರಸಿದ್ಧವಾದ ದೇಶ ಎಂದೇ ಆಗಿದೆ. ಕೇಶವರ್ಣಿ ಎಂಬ ಜೈನ ಪಂಡಿತನ ಪ್ರಕಾರ ಕರ್ಣ ಎಂಬ ಧಾತುವಿನಿಂದ ಕರ್ಣಾಟ ಎಂಬ ಶಬ್ದ ಹುಟ್ಟಿದೆ. ಇಂತಹ ವಿವರಣೆಗಳು ಯಾವ ಹೆಸರನ್ನು ಕುರಿತಾದರೂ ಹುಟ್ಟಿಕೊಳ್ಳಬಹುದು. ಅದಕ್ಕೆ ಆಧಾರವೂ ಬೇಕಿಲ್ಲ. ತರ್ಕವೂ ಬೇಕಿಲ್ಲ. ಆದರೂ ಅವುಗಳು ಕಥಾ ರೂಪದಲ್ಲಿ ಪರಂಪರಾಗತವಾಗಿ ಬಂದು ಬಿಡುತ್ತವೆ. ಅವುಗಳನ್ನು ಸಂಸ್ಕೃತ ಸೂತ್ರ ರೂಪದಲ್ಲಿ ನಿರೂಪಿಸುವುದರಿಂದ ಒಂದು ರೀತಿಯಲ್ಲಿ ನಂಬಬಹುದಾದ ಆವರಣವೂ ಸೃಷ್ಟಿಯಾಗಿ ಬಿಡುತ್ತದೆ.

ಕವಿ ಚರಿತೆಕಾರರಾದ ರಾ. ನರಸಿಂಹಚಾರ್ಯರು ಮೇಲಿನ ವಾದಗಳನ್ನು ಕಪೋಲ ಕಲ್ಪಿತವೆಂದು ನಿರಾಕರಿಸಿದ್ದಾರೆ. ಅವರು ಕನ್ನಡವೇ ಮೊದಲು ಇದ್ದು ಅನಂತರ ಕರ್ನಾಟ ಬಂದಿರಬೇಕು ಎನ್ನುತ್ತಾರೆ. ಏಕೆಂದರೆ ಕರ್ಣಗಳಲ್ಲಿ ಗುಂಯ್‌ಗುಡುತ್ತಿದ್ದ ಶಬ್ದವೊಂದು (ಹೆಸರು) ಮೊದಲೇ ಇರಬೇಕಲ್ಲವೆ. ಆದ್ದರಿಂದ ತರ್ಕಬದ್ಧವಾಗಿ ಹೇಳಬೇಕಾದರೆ ಮೊದಲೇ ಒಂದು ಹೆಸರು ಇರಬೇಕು, ಅದು ಕನ್ನಡವೇ ಆಗಿರಬಹುದು ಎನ್ನುತ್ತಾರೆ. ರಾ. ನರಸಿಂಹಾಚಾರ್ಯರು ಮೇಲಿನ ಕಥೆಗಳನ್ನು ಒಪ್ಪದೆ ಹೋಗುವ ಮೊದಲು ಮಹಿಷಾಸುರನ ಕಥೆಯನ್ನು ಪರಿಗಣಿಸಬೇಕಾಗಿತ್ತು. ಮಹಿಷಾಸುರನ ಹೆಸರಿನಿಂದಾಗಿ ಮೈಸೂರು ಎಂಬ ಹೆಸರು ಬರುವುದಾದರೆ ಕರ್ನಾಟ ಎಂಬ ರಾಕ್ಷಸನಿಂದ ಕರ್ನಾಟಕ ಎಂಬ ಹೆಸರು ಬಂದಿರಬಹುದೆಂದು ಹೇಳಬಹುದು.

ರಾಜವಾಡೆ ಎಂಬ ವಿದ್ವಾಂಸರು ಕರ್ನಾಟಕ ಶಬ್ದದ ವ್ಯುತ್ಪತ್ತಿಯನ್ನು ಕುರಿತು ಹೇಳುತ್ತಾ ಕರಣ ಮತ್ತು ನಾಟ ಎಂಬ ಎರಡು ಜನಾಂಗದವರ ಬೀಡು ಕರ್ನಾಟಕ ಎನ್ನುತ್ತಾರೆ. ಅವರು ಕ್ಷತ್ರಿಯ ವೀರರೆಂದು ಹೊಗಳಿದ್ದಾರೆ. ಈ ಬಗ್ಗೆ ಮತ್ಸ್ಯಪುರಾಣದಲ್ಲಿ ಉಲ್ಲೇಖವಿದೆ ಎನ್ನುತ್ತಾರೆ. ಈ ವಿಚಾರವಾಗಿ ಅನೇಕ ವಿದ್ವಾಂಸರು ದೀರ್ಘ ಚರ್ಚೆಯನ್ನು ಮಾಡಿದ್ದಾರೆ. ಕನ್ನಡ ಎಂಬ ಶಬ್ದದಲ್ಲಿ ನಡು ಅಥವಾ ನಾಡು ಎಂಬ ಮಾತು ಇರುವುದರಲ್ಲಿ ಸಂಶಯವಿಲ್ಲ. ಆದರೆ ನಾಡು ಅಥವಾ ನಡು ಎಂಬ ಪದದ ಹಿಂದೆ ಇರುವ ಇನ್ನೊಂದು ಪದ ಯಾವುದು ಎಂಬುದರ ಬಗೆ ಭಿನ್ನಾಭಿಪ್ರಾಯಗಳಿವೆ. ಈ ಬಗೆ ಚರ್ಚಿಸಿರುವ ವಿದೇಶೀ ವಿದ್ವಾಂಸರಾದ ಕಾಲ್ಡ್‌ವೆಲ್ ಮತ್ತು ಗುಂಡರ್ಟ್ ಅವರು ಕರ್+ನಾಡು ಎಂದು ಬಿಡಿಸುತ್ತಾರೆ. ಇದರ ಅರ್ಥ ಕರಿಯ ನಾಡಿನ ಭೂಮಿ ಎಂದು. ಕಾಲ್ಡ್‌ವೆಲ್ ಅವರು ಕನ್ನಡ ನಾಡನ್ನು ಚೆನ್ನಾಗಿ ಬಲ್ಲವರು. ನಾಡಿನ ಬಹುಭಾಗ ಕಪ್ಪುಮಣ್ಣಿನಿಂದ ಕೂಡಿದೆ ಎಂದು ಸಂಶಯ ಪಡುತ್ತಾರೆ. ಹಳೆಯ ಮೈಸೂರು, ಉತ್ತರ ಕನ್ನಡ ಜಿಲ್ಲೆ, ದಕ್ಷಿಣ ಕನ್ನಡ ಜಿಲ್ಲೆಗಳ ಮಣ್ಣು ಕೆಂಪು ಬಣ್ಣದಿಂದ ಕೂಡಿದೆ. ಇದನ್ನು ಕೆನ್ನಾಡು ಅಥವಾ ಎರೆಭೂಮಿ ಎನ್ನಬಹುದಲ್ಲವೆ. ಈ ದಿಕ್ಕಿನಲ್ಲಿ ಆಲೋಚನೆ ಮಾಡಿದ ಹಟ್ಟಂಗಡಿ ನಾರಾಯಣರಾಯರು ತಮ್ಮ ವಾದವನ್ನು ಮಂಡಿಸುತ್ತಾರೆ. ಕರ್ನಾಟಕವು ಸಮುದ್ರ ಮಟ್ಟದಿಂದ ಮೇಲಿದೆ. ಘಟ್ಟಗಳ ತಪ್ಪಲು ಪ್ರದೇಶವಾಗಿದೆ. ಆದ್ದರಿಂದ ಕರು+ನಾಡು ಎಂದು ಬಿಡಿಸಿಕೊಂಡು ಅರ್ಥ ಮಾಡಿಕೊಳ್ಳಬೇಕು. ತಪ್ಪಲು ಪ್ರದೇಶ ಎಂದು ತಿಳಿಯಬೇಕು. ಆದರೆ ಪೂರ್ಣವಾಗಿ ಬಯಲು ಸೀಮೆಯಾಗಿರುವ ಭಾಗಕ್ಕೆ ಈ ಹೆಸರು ಅನ್ವಯವಾಗುವುದಿಲ್ಲ. ತಮಿಳರು ಮಾತ್ರ ಕರುನಾಡಿಗರ್ ಎಂದು ಹೇಳಬಹುದು. ಕನ್ನಡದ ಸಾಹಿತ್ಯ ಕೃತಿಗಳಲ್ಲಿ ಕರುನಾಡು ಎಂಬ ಹೆಸರು ಸಿಗುವುದಿಲ್ಲ. ಇದನ್ನು ಗಮನಿಸಿದ ಪ್ರಸಿದ್ಧ ವಿದ್ವಾಂಸರಾದ ಮೈಸೂರು ಹಟ್ಟಿ ಕೃಷ್ಣ ಅವರು ಈ ವ್ಯುತ್ಪತ್ತಿ ಅಷ್ಟೇನೂ ಸಾಧುವಲ್ಲ ಎಂದಿದ್ದಾರೆ. ಆರ್. ತಾತಾಚಾರ್ಯ ಅವರು ಕರುನಡಂ>ಕನ್ನಡಂ ಎಂದು ಸೂಚಿಸಿ ಘಟ್ಟದ ಕೆಳಗಿನ ತಮಿಳರು ಘಟ್ಟದ ಮೇಲಿನ ಜನರನ್ನು ಕರುನಾಡಗರ್ ಎನ್ನುತ್ತಾರೆಂದು ತಿಳಿಸುತ್ತಾರೆ. ಗೋವಿಂದ ಪೈಯವರು ಕರು+ನಾಡು ಎಂದು ಬಿಡಿಸಿದರೂ, ಕರು ಎಂಬ ಶಬ್ದಕ್ಕೆ ಬೇರೆ ಅರ್ಥವನ್ನು ಕೊಟ್ಟಿದ್ದಾರೆ. ಅವರ ಪ್ರಕಾರ ಕರು ಎಂದರೆ ವಿಸ್ತೀರ್ಣವಾದುದು ಮಹಾ-ರಾಷ್ಟ್ರ ಎಂದು ಅರ್ಥ. ಶ್ರೀ. ದೇಶಪಾಂಡೆಯವರೂ ಕೂಡ ಇದೇ ಅಭಿಪ್ರಾಯವನ್ನು ಹೊಂದಿದ್ದರು. ಆದರೆ ಖ್ಯಾತ ವಿದ್ವಾಂಸರಾದ ಶಂ.ಬಾ. ಜೋಷಿಯವರು ಇದನ್ನು ಒಪ್ಪಲಿಲ್ಲ. ಅವರ ದೃಷ್ಟಿಯಲ್ಲಿ ಕನ್ನಡವು 'ಕರ್ನಾಟ' ತದ್ಭವವೇ ಆಗಿದೆ. ಕವಿಚರಿತೆಕಾರರು ಕಮ್ಮಿತು+ನಾಡು=ಕನ್ನಾಡ>ಕನ್ನಡು>ಕನ್ನಡ ಎಂಬ ವ್ಯುತ್ಪತ್ತಿಯನ್ನು ಪ್ರತಿಪಾದಿಸುತ್ತಾರೆ. ಕಮ್ಮಿತು ಎಂದರೆ ಸುವಾಸನೆಯಿಂದ ಕೂಡಿದುದು. ಈ ಪ್ರದೇಶದಲ್ಲಿ ಮಲ್ಲಿಗೆ ಹೂವು, ಶ್ರೀಗಂಧದ ಮರ ಬೆಳೆಯುವುದರಿಂದ ಸುವಾಸನೆಯಿಂದ ಕೂಡಿದ ಪ್ರದೇಶ ಎಂದು ಈ ವ್ಯುತ್ಪತ್ತಿ ವಿಧಾನದ ರೀತ್ಯಾ ತಿಳಿಯುತ್ತದೆ. ಈ ವಾದದಲ್ಲಿ ತರ್ಕಕ್ಕಿಂತ ಹೆಚ್ಚಾಗಿ ಅಭಿಮಾನವನ್ನು ಕೆಲವರು ಗುರುತಿಸುತ್ತಾರೆ. ಬೇಂದ್ರೆಯವರು ಮತ್ತು ಬೆಟಗೇರಿಯವರು ಕನ್+ಅಳ್ ಎಂಬ ಪದಗಳ ಜೋಡಣೆಯನ್ನು ಸಾದಾರ ಪಡಿಸುತ್ತಾರೆ. ಕನ್ ಎಂದರೆ ಕಾಣುವುದು ಎಂದು ಅರ್ಥ. ಅವರ ಪ್ರಕಾರ 'ಮನಸ್ಸಿನಲ್ಲಿ ಇರುವುದನ್ನು ಸಮರ್ಪಕವಾಗಿ ವ್ಯಕ್ತಪಡಿಸುವ ಶಕ್ತಿಯನ್ನು ಹೊಂದಿರುವ ಭಾಷೆ' ಎಂದು ಹೇಳಿದಂತೆ ತೋರುತ್ತದೆ. ಕನ್+ಅಳ್=ಕನ್ನಳ್>ಕನ್ನಡ ಇದನ್ನು ಮುಳಿಯ ತಿಮ್ಮಪ್ಪಯ್ಯನವರೂ ಒಪ್ಪಿದ್ದಾರೆ. ಆದರೆ ಇದನ್ನು ಒಪ್ಪದವರು ಕನ್ನಳ್>ಕನ್ನಡ ಎಂದಾಗುವುದನ್ನು ಒಪ್ಪುವುದಿಲ್ಲ. ಕನ್ನಡದಲ್ಲಿ 'ಡ' ಕಾರವು 'ಳ' ಕಾರವಾಗಬಲ್ಲುದೇ ವಿನಾ 'ಳ' ಕಾರವು 'ಡ' ಕಾರ ವಾಗುವುದಿಲ್ಲ ಎನ್ನುತ್ತಾರೆ.

ಕನ್ನಡದ ಕಣ್ವರೆಂದು ಪ್ರಖ್ಯಾತರಾದ 'ಶ್ರೀ' ಅವರು ಕರ್+ನಾಟ+ಅಕಂ ಎಂದು ಬಿಡಿಸುತ್ತಾರೆ. ಅದರ ಅರ್ಥವೆಂದರೆ ಕಪ್ಪು ಪ್ರದೇಶವನ್ನು ಒಳಗೊಂಡ ನಾಡು ಎಂದು. ಫಾದರ್ ಹೆರಾಸ್ ಅವರು ಕಣ್+ನೀರ್=ಕಣ್ಣೀರ್>ಕಣ್ಣರ್>ಕನ್ನಡ ಎಂಬ ಸೂತ್ರವನ್ನು ಕೊಟ್ಟಿದ್ದಾರೆ.

ತೀ.ನಂ.ಶ್ರೀ. ಮತ್ತು ಜಿ.ಪಿ. ರಾಜರತ್ನಂ ಅವರು ಕರ್ನಾಡು ಎಂಬ ಶಬ್ದದಿಂದ ಕರ್ನಾಟ, ಕರ್ನಾಟಕ ಎಂಬ ಶಬ್ದಗಳು ಸಿದ್ಧಿಸಿದುವೆಂದು ಹೇಳುತ್ತಾರೆ. ಪ್ರಸಿದ್ಧ ಇತಿಹಾಸ ತಜ್ಞರಾದ ಸಾಲೆತೊರೆಯವರು ವಿದೇಶೀಯರ ಪ್ರಕಾರ ಕೆನರಿ, ಕೆನರಿಮ್, ಕೆನರೀಚ್, ಕೆನರಿನ್, ಕನ್ನರಿ, ಕರ್ನಾಟಿಕ್, ಕರ್ನಾಟಿ, ಕರ್ನಾಟ್ ಎಂಬ ಹೆಸರುಗಳು ಇಂಗ್ಲಿಷ್ ಲಿಪಿಯಲ್ಲಿರುವುದನ್ನು ಕುರಿತು ತಿಳಿಸಿದ್ದಾರೆ.

ಒಂದು ಒಟ್ಟು ಅಭಿಪ್ರಾಯವನ್ನು ತೆಗೆದುಕೊಂಡರೆ ಕನ್ನಡ ಶಬ್ದವು ಸಂಸ್ಕೃತದಿಂದ ಹುಟ್ಟಿಲ್ಲವೆಂಬೂದೂ, ದೇಶೀಯ ಶಬ್ದವೇ ಆಗಿದೆ ಎಂಬುದೂ ಹೆಚ್ಚು ಮಾನ್ಯತೆ ಪಡೆದಿರುವಂತೆ ಕಾಣುತ್ತದೆ.

## 2.3 ಕನ್ನಡ ನಾಡು

ಕನ್ನಡ ನಾಡು ಎಷ್ಟು ಪ್ರಾಚೀನವಾದುದು ಎಂಬ ವಿಚಾರವಾಗಿ ಮಾಹಿತಿಗಳು ದೊರೆಯುತ್ತವೆ. ದಕ್ಷಿಣ ಭಾರತಕ್ಕೆ ಆರ್ಯರು ಪ್ರವೇಶ ಮಾಡಿದ ಕಾಲದಿಂದಲೂ ಕನ್ನಡ ನಾಡಿನ ವಿಚಾರ ಲಭ್ಯವಾಗುತ್ತದೆ. ರಾಮಾಯಣದಲ್ಲಿ ಬರುವ ದಂಡಕಾರಣ್ಯ ಪ್ರದೇಶವೇ ನಂತರ ಕರ್ನಾಟಕ ಪ್ರದೇಶ ಎಂದು ಪ್ರಸಿದ್ಧವಾಯಿತೆಂದು ಹೇಳಲಾಗುತ್ತದೆ. ಕಿಷ್ಕಿಂದಾ ರಾಜ್ಯವು ತುಂಗಭದ್ರಾ ತೀರದ ಈಗಿನ ಹಂಪೆಯ ಸುತ್ತಮುತ್ತಣ ಪ್ರದೇಶ ಎನ್ನುವ ಅಭಿಪ್ರಾಯವಿದೆ.

ಮಹಾಭಾರತದಲ್ಲಿ ಮೊದಲು ಕರ್ನಾಟಕದ ಹೆಸರು ಇದೆ. ಕ್ರಿ.ಪೂ. ನಾಲ್ಕನೆಯ ಶತಮಾನದಲ್ಲಿ ಮಗಧರಾಜ್ಯದ ಪ್ರಭಾವ ಕರ್ನಾಟಕ ರಾಜ್ಯದವರೆಗೂ ಹಬ್ಬಿದ್ದಿತು. ಚಂದ್ರಗುಪ್ತ ಮೌರ್ಯನು ಕ್ರಿ.ಪೂ. ನಾಲ್ಕನೇ ಶತಮಾನದಲ್ಲಿ ಶ್ರವಣಬೆಳಗೊಳಕ್ಕೆ ಬಂದು ನೆಲಸಿದ ವಿಚಾರ ಪ್ರಸಿದ್ಧವೇ ಆಗಿದೆ. ಅಶೋಕನ ಶಾಸನಗಳು ಕರ್ನಾಟಕದ ಮಾಸ್ಕಿ, ಕೊಪ್ಪಳ, ಬ್ರಹ್ಮಗಿರಿ ಮುಂತಾದ ಕಡೆ ದೊರೆಯುತ್ತದೆ. ಇಡೀ ಕರ್ನಾಟಕ ರಾಜ್ಯವು ಅಶೋಕನ ಆಳ್ವಿಕೆಗೆ ಸೇರಿಹೋಗಿತ್ತು. ಶಾತವಾಹನರ ಆಳ್ವಿಕೆಗೂ ಕರ್ನಾಟಕ ಸೇರಿದ್ದಿತು. ಪಾಶ್ಚಾತ್ಯ ಲೇಖಕರೂ ಕೂಡ ಮುದ್ಗಲ್, ಬನವಾಸಿ, ಹಿಪ್ಪರಗಿ, ಮಲ್ಪೆ ಮುಂತಾದ ಸ್ಥಳಗಳ ಹೆಸರನ್ನು ಹೇಳಿದ್ದಾರೆ. ಗ್ರೀಕ್ ಹಾಸ್ಯ ನಾಟಕವೊಂದರಲ್ಲಿ ಕೆಲವು ಕನ್ನಡ ಶಬ್ದಗಳಿವೆಯೆಂದು ತಿಳಿದುಬರುತ್ತದೆ.

ಐತಿಹಾಸಿಕ ಯುಗಕ್ಕೆ ಬಂದರೆ ಉತ್ತರ ಕರ್ನಾಟಕದಲ್ಲಿ ಕದಂಬರು, ದಕ್ಷಿಣ ಕರ್ನಾಟಕದಲ್ಲಿ ಗಂಗರು ರಾಜ್ಯ ಸ್ಥಾಪನೆ ಮಾಡಿದ್ದರು. ಕದಂಬರು ಸುಮಾರು ಇನ್ನೂರು ವರ್ಷಗಳ ಕಾಲ ಆಳಿದರು. ಕ್ರಿ.ಶ. ಆರನೆಯ ಶತಮಾನದಲ್ಲಿ ಕದಂಬರಾ ಆಳ್ವಿಕೆ ಕೊನೆಗೊಂಡಿತು. ಇವರ ಕಾಲದಲ್ಲಿ ಹಿಂದೂ ಸಂಸ್ಕೃತಿಗೆ ಮನ್ನಣೆ, ಪ್ರೋತ್ಸಾಹ ಇತ್ತು. ಜೈನ ಬೌದ್ಧ ಧರ್ಮಗಳಿಗೆ ಪುರಸ್ಕಾರವಿತ್ತು. ವಾಸ್ತು ಶಿಲ್ಪ ಕಲೆಗೆ ಹೆಚ್ಚಿನ ಪ್ರೋತ್ಸಾಹವೂ ದೊರೆಯಿತು. ಗಂಗರು ಕ್ರಿ.ಶ. ೧೦ನೇ ಶತಮಾನದವರೆಗೂ ಕರ್ನಾಟಕದಲ್ಲಿ

ಪ್ರಭಾವಶಾಲಿಗಳಾಗಿದ್ದರು. ಇವರು ಧರ್ಮ, ಕಲೆ ಸಾಹಿತ್ಯಗಳಿಗೆ ಹೆಚ್ಚು ಪ್ರೋತ್ಸಾಹ ನೀಡಿದ್ದರು. ಗೊಮ್ಮಟೇಶ್ವರ ನಿರ್ಮಾಣವೂ ಸೇರಿದಂತೆ ವಾಸ್ತು ಶಿಲ್ಪಕಲೆಗೆ ಹೆಚ್ಚು ಮನ್ನಣೆ ನೀಡಿದರು. ಬಾದಾಮಿಯ ಚಾಳುಕ್ಯರು ಇಮ್ಮಡಿ ಪುಲಿಕೇಶಿಯ ಕಾಲದಲ್ಲಿ ಅತ್ಯುನ್ನತ ಕೀರ್ತಿವಂತರಾದರು. ನಿಜವಾಗಿಯೂ ಇವರ ಕಾಲದಲ್ಲಿ ಕರ್ನಾಟಕದ ಸರ್ವಾಂಗೀಣ ಪ್ರಗತಿ ಆಗತೊಡಗಿತು. ಕನ್ನಡ ನಾಡಿನ ಬಹುಪಾಲು ಒಂದು ಆಡಳಿತ ಕಳಗೆ ಬಂದದ್ದು ಇವರ ಕಾಲದಲ್ಲಿಯೇ ಇವರ ಕಾಲದಲ್ಲಿ ಬಂದಿದ್ದ ಚೀನಾದ ಯಾತ್ರಿಕ ಹ್ಯೂಯನ್ ತ್ಸಾಂಗನು ಜನರ ನ್ಯಾಯಪರತೆಯನ್ನು ಉತ್ಸಾಹಶೀಲತೆಯನ್ನು, ಉಪಕರಿಸುವ ಸ್ವಭಾವವನ್ನು ಕೊಂಡಾಡಿದ್ದಾನೆ. ಇವರ ಕಾಲದಲ್ಲಿ ವಿದೇಶಗಳೊಡನೆ ವ್ಯಾಪಾರ ನಡೆಯುತ್ತಿತ್ತು. ಕನ್ನಡ ಮತ್ತು ಕನ್ನಡ ಲಿಪಿಯ ಸಂಸ್ಕೃತ ಭಾಷೆಗಳನ್ನು ಬಳಸುತ್ತಿದ್ದರು.

ರಾಷ್ಟ್ರಕೂಟರ ಕಾಲದಲ್ಲಿ ಕರ್ನಾಟಕದ ವೈಭವ ಉನ್ನತ ಮಟ್ಟವನ್ನು ಮುಟ್ಟಿತು. ಇವರು ಸಾಮ್ರಾಜ್ಯದ ಗಡಿಗಳನ್ನು ವಿಸ್ತರಿಸಿದರು. ಪ್ರಭುತ್ವವು ಸರ್ವಧರ್ಮಗಳಿಗೂ ಸಮಾನ ಆಶ್ರಯವನ್ನು ನೀಡಿದ್ದರು. ಸಂಸ್ಕೃತ ಮತ್ತು ಕನ್ನಡ ಸಾಹಿತ್ಯಗಳಿಗೆ ಇವರ ಕಾಲವು ಮಹತ್ವದ ಯುಗವಾಗಿತ್ತು. ಸಾಹಿತ್ಯದ ದೃಷ್ಟಿಯಿಂದ ನೋಡಿದರೆ ಇದೊಂದು ಪರ್ವಕಾಲವಾಗಿತ್ತು. ಈ ವೇಳೆಗಾಗಲೇ ಕನ್ನಡವೇ ನಾಡಿದ ಭಾಷೆಯಾಗಿತ್ತು. ರಾಷ್ಟ್ರಕೂಟರ ನಂತರ ಕಲ್ಯಾಣಿ ಚಾಳುಕ್ಯರು ಪ್ರಭುತ್ವ ಸೂತ್ರವನ್ನು ಹಿಡಿದುಕೊಂಡರು. ಹದಿನಾಲ್ಕನೆಯ ಶತಮಾನದವರೆಗೆ ಆಳಿದ ಇವರ ಕಾಲದಲ್ಲಿ ಮಲಿಕ್ ಕಾಫೂರನು ದಕ್ಷಿಣಕ್ಕೆ ಕಾಲಿಡುವುದನ್ನು ನೋಡುತ್ತೇವೆ. ಹೊಯ್ಸಳರು ಚಾಳುಕ್ಯರ ನಂತರ ಕರ್ನಾಟಕದ ಪ್ರಬಲ ರಾಜಮನತನವೆಂದು ಪ್ರಸಿದ್ಧರಾದರು. ಉದಾರ ಹೃದಯಿಗಳಾದ ಹೊಯ್ಸಳರ ಕಾಲದಲ್ಲಿ ಜನಜೀವನ ಉತ್ತಮ ಮಟ್ಟದಲ್ಲಿದ್ದಿತು. ಅಧಿಕಾರದ ವಿಕೇಂದ್ರಿಕರಣದ ಬಗ್ಗೆ ಇವರಿಗೆ ಆಸಕ್ತಿಯಿತ್ತು. ಚೋಳರ ಪ್ರಾಬಲ್ಯವನ್ನು ಮುರಿದುದು ಇವರ ಬಹುದೊಡ್ಡ ಸಾಧನೆಯಾಗಿದೆ. ಕರ್ನಾಟಕದ ಮೇಲೆ ದೆಹಲಿ ಸುಲ್ತಾನರ ಕಣ್ಣು ಬಿದ್ದುದರಿಂದ ಹೊಯ್ಸಳ ವಂಶ ಅವಸಾನಹೊಂದಿತು. ಇವರ ಕಾಲದಲ್ಲಿ ಅನೇಕ ಮಹತ್ವಪೂರ್ಣ ಘಟನೆಗಳು, ವಿದ್ಯಮಾನಗಳು ನಡೆದುವು. ವಚನ ಸಾಹಿತ್ಯದ ಮೂಲಕ ಕನ್ನಡದಲ್ಲಿ ತತ್ತ್ವ ಪ್ರಚಾರ ಪ್ರಾರಂಭವಾಯಿತು. ಅನ್ಯಮತ ಸಹಿಷ್ಣುತೆಯನ್ನು ನಾಡಿನಲ್ಲಿ ನೋಡಬಹುದಾಗಿತ್ತು. ರಾಮಾನುಜಚಾರ್ಯರು ಕರ್ನಾಟಕ್ಕೆ ಬಂದು ವೈಷ್ಣವ ಮತ ಪ್ರಚಾರವನ್ನು ಕೈಗೊಂಡರು. ಮಧ್ವಾಚಾರ್ಯರು ಕನ್ನಡ ನಾಡಿನಲ್ಲಿಯೇ ಹುಟ್ಟಿ ದ್ವೈತಮತ ಪ್ರಚಾರವನ್ನು ಮಾಡಿದರು. ಈ ಕಾಲದ ಸಾಹಿತ್ಯದ ಬೆಳವಣಿಗೆಯೂ ಗಮನಾರ್ಹವಾದುದು.

ವಿಜಯನಗರ ಸಾಮ್ರಾಜ್ಯದ ಬಗೆಗೆ ಹೇಳಬೇಕಾದುದು ತುಂಬಾ ಹೆಚ್ಚಾಗಿಯೇ ಇದೆ. ಸುಮಾರು ಮೂರು ಶತಮಾನಗಳ ಕಾಲ ವೈಭವದಿಂದ ಆಳಿದ ಈ ಸಾಮ್ರಾಜ್ಯವು ಅನೇಕ ಸಾಧನೆಗಳನ್ನು ಮಾಡಿದೆ. ಮುಖ್ಯವಾಗಿ ಹಿಂದೂ ಧರ್ಮದ ಪುನರುಜ್ಜೀವನಕ್ಕೆ ಈ ಸಾಮ್ರಾಜ್ಯ ಟೊಂಕಕಟ್ಟಿ ನಿಂತಿತು. ಅನ್ಯಧರ್ಮಗಳನ್ನು ದ್ವೇಷಿಸುವ ಕಾರ್ಯವನ್ನು ಅವರು ಒಪ್ಪಲಿಲ್ಲ. ಶ್ರೀ. ವೈಷ್ಣವ ಧರ್ಮಕ್ಕೆ ಹೆಚ್ಚು ಪ್ರೋತ್ಸಾಹ ದೊರೆಯಿತು. ವಿಜಯನಗರದ ನಂತರ ಕರ್ನಾಟಕದಲ್ಲಿ ಅನೇಕ ಸಣ್ಣಪುಟ್ಟ ರಾಜಮನತನಗಳು ರಾಜ್ಯಭಾರ ಮಾಡಿದುವು.

ಕರ್ನಾಟಕ ಜನಜೀವನದ ಮೇಲೆ ಆರು ಶತಮಾನಗಳಿಂದ ಇಸ್ಲಾಂ ಮತವೂ ಎರಡು ಶತಮಾನಗಳಿಂದ ಕ್ರೈಸ್ತಮತವೂ ಪ್ರಭಾವವನ್ನು ಬೀರಿದೆ. ಒಟ್ಟಾರೆ ಕನ್ನಡನಾಡು ಕ್ರಿಸ್ತಪೂರ್ವದ ಕಾಲದಿಂದಲೂ ಅಸ್ತಿತ್ವದಲ್ಲಿದೆ ಎಂದು ತಿಳಿದು ಬರುತ್ತದೆ.

## 2.4 ಕನ್ನಡ ನುಡಿ

ಕನ್ನಡ ಶಬ್ದದ ರೂಪ ನಿಷ್ಪತ್ತಿಯ ಬಗ್ಗೆ ಈಗಾಗಲೇ ನೋಡಿದ್ದೇವೆ. ದ್ರಾವಿಡರು ಕನ್ನಡ ಭಾಷೆಯನ್ನಾಡುವ ಜನರು. ಆರ್ಯರು ಬಂದ ನಂತರ ದ್ರಾವಿಡರು ದಕ್ಷಿಣಕ್ಕೆ ಬಂದರೆಂದು ಚರಿತ್ರಾಕಾರರು ತಿಳಿಸುತ್ತಾರೆ. ದ್ರಾವಿಡರು ಮೂಲ ಭಾಷೆಯ ಹೆಸರೇ ದ್ರಾವಿಡ ಭಾಷೆ ಬಹುಶಃ ಈ ಭಾಷೆಯನ್ನು ಆಡುವವರಿಂದಾಗಿಯೇ ಈ ಹೆಸರು ಬಂದಿರಬೇಕು. ಮೂಲ ದ್ರಾವಿಡ ಭಾಷೆಯಿಂದ ಕವಲೊಡೆದು ಪ್ರತ್ಯೇಕಗೊಂಡು ವಿಕಾಸಹೊಂದಿದ ಭಾಷೆ ಕನ್ನಡ. ಇದರ ಪ್ರಾಚೀನತೆಯನ್ನು ನೋಡುವುದಾದರೆ ವೇದ ಕಾಲದಿಂದಲೂ ಕನ್ನಡವು ಅಸ್ತಿತ್ವದಲ್ಲಿತ್ತು ಎಂದು ತಿಳಿಯುತ್ತದೆ. ಛಾಂದೋಗ್ಯ ಉಪನಿಷತ್ತಿನಲ್ಲಿ, ಕೆಲವು ಪುರಾಣಗಳಲ್ಲಿ, ಎರಡನೇ ಶತಮಾನದ ಗ್ರೀಕ್ ಹಾಸ್ಯ ನಾಟಕದಲ್ಲಿ ಕನ್ನಡ ಶಬ್ದಗಳಿವೆ. ಇನ್ನೂ ಮೊದಲೇ ಕರಾವಳಿ ಪ್ರದೇಶದಲ್ಲಿ ಕನ್ನಡವು ವ್ಯವಹಾರದ ಭಾಷೆಯಾಗಿತ್ತು. ರಾಮಾಯಣ, ಮಹಾಭಾರತ ಹಾಗೂ ಕ್ರಿ.ಶ. ಎರಡನೆ ಶತಮಾನದ ತಮಿಳು ಕೃತಿ ಶಿಲಪ್ಪದಿಗಾರಂ ಇವುಗಳಲ್ಲಿ ಕರುನಾಡರ್ ಎಂಬ ಉಲ್ಲೇಖವಿದೆ. ಹರಪ್ಪ ಮತ್ತು ಮೊಹೆಂಜೊದಾರೊಗಳಲ್ಲಿ ನಡೆಸಿದ ಸಂಶೋಧನೆಗಳ ಮೂಲಕ ತಿಳಿದು ಬಂದಂತೆ ಅಲ್ಲಿ ದ್ರಾವಿಡ ಸಂಸ್ಕೃತಿ ಇತ್ತೆಂದು ಹೇಳಬಹುದು. ಈಗ ವಾಸ್ತವವಾಗಿ ಸಿಕ್ಕಿರುವ ಆಧಾರಗಳ ಪೈಕಿ ಕ್ರಿ.ಶ. ೫ನೆಯ ಶತಮಾನದ ಹಲ್ಮಿಡಿ ಶಾಸನ ಬಹಳ ಮುಖ್ಯವಾದುದು. ಶಾಸನದಲ್ಲಿರುವ ಕನ್ನಡ ಭಾಷೆಯನ್ನು ನೋಡಿದರೆ ಆ ಕಾಲಕ್ಕಾಗಲೇ ಕನ್ನಡ ಗದ್ಯದ ಬಳಕೆಯಿತ್ತೆಂದು ತಿಳಿಯುತ್ತದೆ ಮತ್ತು ಸಂಸ್ಕೃತದ ಪ್ರಭಾವ ಕನ್ನಡದ ಮೇಲೆ ಹೆಚ್ಚಾಗಿ ಬೀಳುತ್ತಿತ್ತು ಎಂಬುದೂ ತಿಳಿಯುತ್ತದೆ. ಈ ಶಾಸನಗಳನ್ನು ಬಿಟ್ಟರೆ ಸಾಹಿತ್ಯ ಕೃತಿಗಳು ಆಧಾರವಾಗಿ ಸಿಗುತ್ತವೆ. ಅವುಗಳೇ 'ಕವಿರಾಜಮಾರ್ಗ' ಮತ್ತು 'ವಡ್ಡಾರಾಧನೆ' ಇವುಗಳು ಕ್ರಿ.ಶ. ಒಂಬತ್ತನೇ ಶತಮಾನಕ್ಕೆ ಸೇರಿವೆ. 'ಪಂಪಭಾರತ' ಕಾವ್ಯವು ಕ್ರಿ.ಶ. ೧೦ನೇ ಶತಮಾನದ ಮಹತ್ವಪೂರ್ಣ ಕೃತಿಯಾಗಿದೆ. 'ಕವಿರಾಜಮಾರ್ಗ' ಎಂಬುದು ಒಂದು ಅಲಂಕಾರಶಾಸ್ತ್ರದ ಗ್ರಂಥವಾಗಿದೆ. ಇದರಲ್ಲಿ ಅಲಂಕಾರ ವಿಷಯ ಮಾತ್ರವಲ್ಲದೆ ಕನ್ನಡ ಭಾಷೆಯ ಬಗ್ಗೆ ಕನ್ನಡಿಗರ ಬಗ್ಗೆ ಮತ್ತು ಕನ್ನಡ ಸಂಸ್ಕೃತಿಯ ಬಗ್ಗೆ ಅಭಿಮಾನದ ಮಾತುಗಳನ್ನು ನೋಡುತ್ತೇವೆ. ಈ ಕೃತಿಯಲ್ಲಿ ತನಗಿಂತ ಹಿಂದೆ ಇದ್ದ ಕನ್ನಡವನ್ನು ಹಳಗನ್ನಡ ಎಂದು ಕರೆಯಲಾಗಿದೆ. ಅಂದರೆ ಎಷ್ಟೋ ಕಾಲ ಹಿಂದಿನಿಂದಲೂ ಕನ್ನಡ ಸಾಹಿತ್ಯ ಕೃತಿಗಳು ರಚನೆಯಾಗುತ್ತಿತ್ತು ಎಂದು ತಿಳಿಯಬಹುದು.

ಕನ್ನಡ ಸಾಹಿತ್ಯಕ್ಕೆ ತುಂಬಾ ಪ್ರಾಚೀನವಾದ ಚರಿತ್ರೆಯಿದೆ. ಕ್ರಿ.ಶ. ೧೮೦೦ ರ ವೇಳೆಗೆ ಸಂಶೋಧಕರು ಸುಮಾರು ೧೨೦೦ ಕವಿಗಳನ್ನು ಗುರುತಿಸಿದ್ದಾರೆ. ಕ್ರಿ.ಶ. ೧೯೦೦ನೇ ಇಸವಿಯ ನಂತರ ಆಧುನಿಕ ಯುಗದಲ್ಲಿ ಕವಿಗಳನ್ನು (ಸಾಹಿತಿಗಳನ್ನು) ಲೆಕ್ಕಹಾಗುವುದು ಸಾಧ್ಯವಿಲ್ಲ. ಕವಿರಾಜಮಾರ್ಗದ ವಿಷಯವನ್ನು ನೀವು ತಿಳಿದಿದ್ದೀರಿ. ಅದರ ನಂತರ ನಮಗೆ ಲಭಿಸಿರುವುದು 'ವಡ್ಡಾರಾಧನೆ' ಎಂಬ ಗದ್ಯಕೃತಿ. ಇದು ಜೈನಮತದ ಸಾಧಕರ ಕತೆಗಳನ್ನು ಒಳಗೊಂಡಿದೆ. ಪಂಪಕವಿಯ 'ವಿಕ್ರಮಾರ್ಜುನ ವಿಜಯ' ಮತ್ತು 'ಆದಿಪುರಾಣ' ಎಂಬ ಚಂಪೂ (ಛಂದಸ್ಸಿನ) ಕಾವ್ಯಗಳು ಕ್ರಮವಾಗಿ ಮಹಾಭಾರತದ ಕಥೆಯನ್ನು, ಪ್ರಥಮ ತೀರ್ಥಂಕರನ ಚರಿತ್ರೆಯನ್ನು ಒಳಗೊಂಡಿದೆ. ಪೊನ್ನ ಕವಿಯ 'ಭುವನೈಕ ರಾಮಾಭ್ಯುದಯ' ಮತ್ತು 'ಶಾಂತಿ ಪುರಾಣ' ಗಳನ್ನು ರಚಿಸಿದ್ದಾನೆ. (ಹತ್ತನೆಯ ಶತಮಾನ) ಇವುಗಳಲ್ಲಿ ಕ್ರಮವಾಗಿ ರಾಮಾಯಣದ ಕಥೆ ಮತ್ತು ತೀರ್ಥಂಕರ ಚರಿತ್ರೆಯನ್ನು ನೋಡಬಹುದು. ಇದೇ ಶತಮಾನದ ರನ್ನ ಕವಿಯು 'ಸಾಹಸಭೀಮ ವಿಜಯ' (ಗದಾಯುದ್ಧ) ಮತ್ತು 'ಅಜಿತ ತೀರ್ಥಂಕರ ಪುರಾಣ' ಗಳನ್ನು ರಚಿಸಿದ್ದಾರೆ. ಇದರಲ್ಲಿ ಕ್ರಮವಾಗಿ ಮಹಾಭಾರತದ ಗದಾಪರ್ವದ ಕಥೆ ಮತ್ತು ತೀರ್ಥಂಕರನ ಚರಿತೆ ಇವುಗಳು ಇವೆ. ಇದೇ ಶತಮಾನಕ್ಕೆ

ಸೇರಿದ ಇನ್ನೊಬ್ಬ ಕವಿಯು ನಾಗವರ್ಮ ಈತನು ಸಂಸ್ಕೃತ ಕವಿ ಬಾಣಭಟ್ಟನ 'ಕಾದಂಬರೀ' ಕಾವ್ಯವನ್ನು ಕನ್ನಡಕ್ಕೆ ಅನುವಾದಿಸಿದ್ದಾನೆ. ಈತನ ಇನ್ನೊಂದು ಕೃತಿಯು ಛಂದಸ್ಸಿಗೆ ಸಂಬಂಧಪಟ್ಟ 'ಛಂದೋಂಬುದಿ' ಎಂಬುದು. ಗಂಗರಾಜ್ಯದಲ್ಲಿ ಮಹಾಮಂತ್ರಿಯಾಗಿದ್ದ ಚಾವುಂಡರಾಯನು ಗದ್ಯದಲ್ಲಿ 'ಚಾವುಂಡರಾಯ ಪುರಾಣ' ಎಂದು ಕರೆಯಲಾಗುವ 'ತ್ರಿಷಷ್ಟಿಶಲಾಕಾ ಪುರುಷ ಪುರಾಣಂ' ಎಂಬ ಕೃತಿಯನ್ನು ರಚಿಸಿದ್ದಾನೆ.

ಹನ್ನೊಂದನೆಯ ಶತಮಾನದಲ್ಲಿ ಗಜಾಂಕುಶ, ಚಂದ್ರಭಟ್ಟ ಮೊದಲಾದ ಕವಿಗಳು ಇದ್ದರೂ ಅವರ ಕೃತಿಗಳು ಸಿಗುವುದಿಲ್ಲ. ಕ್ರಿ.ಶ. ೧೧ನೇ ಶತಮಾನಕ್ಕೆ ಸೇರುವ ಚಾವುಂಡರಾಯ ಎಂಬ ಕವಿಯು 'ಲೋಕೋಪಕಾರ' ಎಂಬ ಶಾಸ್ತ್ರ ಗ್ರಂಥವನ್ನು ಬರೆದಿದ್ದಾನೆ. ದುರ್ಗಸಿಂಹ ಎಂಬ ಕವಿಯು 'ಪಂಚತಂತ್ರ' ಎಂಬ ಸಂಸ್ಕೃತದ ಗ್ರಂಥವನ್ನು ಕನ್ನಡಕ್ಕೆ ಅನುವಾದಿಸಿದ್ದಾನೆ. ಪಂಚತಂತ್ರದ ಹೆಸರನ್ನು ಸಾಮಾನ್ಯವಾಗಿ ಬಹಳ ಜನರು ಕೇಳಿರುತ್ತಾರೆ. ಶ್ರೀಧರಾಚಾರ್ಯ ಎಂಬಾತನು 'ಜಾತಕ ತಿಲಕ' ಎಂಬ ಜೋತಿಷ್ಯ ಗ್ರಂಥವನ್ನು ರಚಿಸಿದ್ದಾನೆ. ಈ ಶತಮಾನದ ಉತ್ತಮ ಕವಿಯಾದ ನಾಗಚಂದ್ರನು 'ಮಲ್ಲಿನಾಥಪುರಾಣ' ಮತ್ತು 'ರಾಮಚಂದ್ರಪುರಾಣ' ಎಂಬ ಚಂಪೂ ಕಾವ್ಯಗಳನ್ನು ರಚಿಸಿದ್ದಾನೆ. ಈ ಕಾವ್ಯಗಳಲ್ಲಿ ಕ್ರಮವಾಗಿ ತೀರ್ಥಂಕರ ಚರಿತೆ ಮತ್ತು ರಾಮಾಯಣದ ಜೈನ ಸಂಪ್ರದಾಯದ ಕಥೆ ಅವುಗಳು ಇವೆ.

ಹನ್ನೆರಡನೆ ಶತಮಾನದ ಅತಿ ಮುಖ್ಯವಾದ ವಿಚಾರವೆಂದರೆ ಶಿವಶರಣರಿಂದ ವಚನಗಳ ರಚನೆ. ವಚನಗಳನ್ನು ಕನ್ನಡದ ಉಪನಿಷತ್ತುಗಳೆಂದು ಕರೆಯಲಾಗಿದೆ. ಈ ಶತಮಾನದ ಇತರ ಕವಿಗಳಾದ ಹರಿಹರ ಮತ್ತು ರಾಘವಾಂಕರು ಕ್ರಮವಾಗಿ ರಗಳೆ ಮತ್ತು ಷಟ್ಪದಿ ಕಾವ್ಯಗಳ ಪ್ರವರ್ತಕರಾದರು. ರಾಘವಾಂಕನ ಹರಿಶ್ಚಂದ್ರ ಕಾವ್ಯವು ಗಮಕಿಗಳಿಗೆ ತುಂಬಾ ಪ್ರಿಯವಾದ ಕಾವ್ಯವಾಗಿದೆ. ಹರಿಹರ ಕವಿಯ ಶಿವಭಕ್ತರ ರಗಳೆಗಳು ಅತ್ಯಂತ ಜನಪ್ರಿಯವಾಗಿವೆ. ನಯಸೇನ ಕವಿಯ 'ಧರ್ಮಾಮೃತ' ಎಂಬ ಕಾವ್ಯವು ಜೈನಮತಕ್ಕೆ ಸಂಬಂಧಿಸಿದ ಕಥೆಗಳನ್ನು ಒಳಗೊಂಡಿದೆ. ನೇಮಿಚಂದ್ರನು 'ಲೀಲಾವತೀ ಪ್ರಬಂಧ' ಮತ್ತು 'ನೇಮಿನಾಥಪುರಾಣ' ಗಳನ್ನು ಚಂಪೂ ಛಂದಸ್ಸಿನಲ್ಲಿ ರಚಿಸಿದನು. ಅಗ್ಗಳದೇವನ 'ಚಂದ್ರಪ್ರಭ ಪುರಾಣ' ವು ಇದೇ ಶತಮಾನದ ಕೃತಿಯಾಗಿದೆ. ಕೆಲವು ಶಾಸ್ತ್ರ ಕವಿಗಳು ಅಲಂಕಾರ, ವ್ಯಾಕರಣ ಮುಂತಾದ ವಿಷಯಗಳಿಗೆ ಸಂಬಂಧಿಸಿದ ಕೃತಿಗಳನ್ನು ರಚಿಸಿದ್ದಾರೆ.

ಹದಿಮೂರನೆಯ ಶತಮಾನದಲ್ಲಿ ಶಿಶಿಮಾಯಣ ಕವಿಯು ಸಾಂಗತ್ಯದಲ್ಲಿ 'ಅಂಜನಾ ಚರಿತ್ರೆ' ಮತ್ತು ಇತರ ಕಾವ್ಯಗಳನ್ನು ರಚಿಸಿದ್ದಾನೆ. ಆಂಡಯ್ಯನು 'ಕಬ್ಬಿಗರಕಾವ' ಎಂಬ ಕಾವ್ಯವನ್ನು ಅಚ್ಚಗನ್ನಡದಲ್ಲಿ ರಚಿಸಿರುವುದು ಒಂದು ವಿಶೇಷವಾಗಿದೆ. ಜನ್ನ ಕವಿಯು ಈ ಕಾಲದ ಪ್ರಸಿದ್ಧ ಕವಿ. ಈತನು 'ಅನಂತನಾಥಪುರಾಣ' ಎಂಬ ಜೈನ ಪುರಾಣ ಕಾವ್ಯವನ್ನು ಮತ್ತು 'ಯಶೋಧರ ಚರಿತೆ' ಎಂಬ ಕಂದ ಪದ್ಯಗಳಿಂದಲೇ ಕೂಡಿದ ಕಾವ್ಯವನ್ನು ರಚಿಸಿದ್ದಾನೆ. ಕುಮುದೇಂದು ರಚಿಸಿರುವ ರಾಮಾಯಣವು ಇದೇ ಶತಮಾನಕ್ಕೆ ಸೇರುತ್ತದೆ. ಈ ಶತಮಾನದಲ್ಲಿ ಚಂಪೂ, ಷಟ್ಪದಿ, ರಗಳೆ, ಸಾಂಗತ್ಯ, ವಚನ, ಹಾಡು ಮುಂತಾದ ಎಲ್ಲ ಬಗೆಯ ಕಾವ್ಯಗಳೂ ಬಂದುವು.

ಹದಿನಾಲ್ಕನೆ ಶತಮಾನದಲ್ಲಿ ಷಟ್ಪದಿ ಛಂದಸ್ಸಿನ ಕಾವ್ಯಗಳಿಗೆ ಪ್ರಾಶಸ್ತ್ಯ. ಭೀಮ ಕವಿಯ 'ಬಸವಪುರಾಣ',ನಾಗರಾಜ ಕವಿಟ 'ಪುಣ್ಯಾಸ್ರ'ವ ಮಧುರ ಕವಿಯ ಧರ್ಮನಾಥ ಪುರಾಣ, ಈ ಶತಮಾನದ ಉತ್ತಮ ಕಾವ್ಯಗಳಾಗಿವೆ. ಹದಿನೈದನೆ ಶತಮಾನದಲ್ಲಿ ಚಂಪೂ ಕಾವ್ಯಗಳು ತುಂಬಾ ಕಡಿಮೆ.

ಷಟ್ಪದಿ, ಸಾಂಗತ್ಯ, ತ್ರಿಪದಿ ಬಳಕೆ ಹೆಚ್ಚಾಗಿ ಕಂಡುಬರುತ್ತದೆ. ಈ ಶತಮಾನದ ಶ್ರೇಷ್ಠ ಕವಿ ಕುಮಾರ ವ್ಯಾಸನು ಗದುಗಿನ ಭಾರತ ವೆಂದು ಪ್ರಸಿದ್ಧ ವಾದ 'ಕರ್ನಾಟಕ ಭಾರತ ಕಥಾಮಂಜರಿ' ಯನ್ನು ರಚಿಸಿದನು. ಚಾಮರಸನ 'ಪ್ರಭುಲಿಂಗಲೀಲೆ', ಭಾಸ್ಕರನ 'ಜೀವಂದರ ಚರಿತೆ' ಲಕ್ಕಣದಂಡೇಶನ 'ಶಿವತತ್ತ್ವಚಿಂತಾಮಣಿ' ಮುಂತಾದುವು ರಚಿತವಾದುವು.

ಹದಿನಾರನೆಯ ಶತಮಾನವು ಹನ್ನೆರಡನೆಯ ಶತಮಾನದಂತೆ ವಿಶಿಷ್ಟವಾದುದು. ವಚನ ಸಾಹಿತ್ಯದಂತೆ ದಾಸ ಸಾಹಿತ್ಯವೂ ಭಕ್ತಿ ಪರವಾದ ಸಾಹಿತ್ಯವಾಗಿದೆ. ಈ ಕಾಲದ ಪ್ರಸಿದ್ಧ ಹರಿದಾಸರು ಹಾಗೂ ಕೀರ್ತನಕಾರರು ಎಂದರೆ ಪುರಂದರದಾಸರು ಮತ್ತು ಕನಕದಾಸರು. ವಾದಿರಾಜರೂ ಕೂಡ ಈ ಕಾಲಕ್ಕೆ ಸೇರುತ್ತಾರೆ. ಕುಮಾರ ವಾಲ್ಮೀಕಿ ಎಂದು ಕರೆದುಕೊಂಡಿರುವ ನರಹರಿ ಕವಿಯು ಷಟ್ಪದಿಯಲ್ಲಿ 'ತೊರವೆ ರಾಮಾಯಣ' ವನ್ನು ರಚಿಸಿದನು. ತಿಮ್ಮಣ್ಣ ಕವಿಯು ಗದುಗಿನ ಭಾರತಕ್ಕೆ ಕೊನೆಯ ಭಾಗವನ್ನು ಬರೆದು ಸೇರಿಸಿದನು. ಕನ್ನಡದಲ್ಲಿ ಭಾಗವತವನ್ನು ರಚಿಸಿದ ಚಾಟುವಿಠ್ಠಲನಾಥನೂ ಇದೇ ಕಾಲದಲ್ಲಿದ್ದನು. ವಿರೂಪಾಕ್ಷ ಪಂಡಿತನು 'ಚನ್ನಬಸವ ಪುರಾಣ' ವನ್ನು ಷಟ್ಪದಿಯಲ್ಲಿ ರಚಿಸಿದನು. ಸಾಳ್ವ ಕವಿಯ 'ಜಿನಭಾರತ' ದೊಡ್ಡಯ್ಯನ 'ಚಂದ್ರಪ್ರಭ ಚರಿತ್ರೆ' ರತ್ನಾಕರ ವರ್ಣಿಯ 'ಭರತೇಶ ವೈಭವ' ನಂಜುಂಡ ಕವಿಯ 'ಕುಮಾರರಾಮಚರಿತೆ' ಇವುಗಳು ತುಂಬಾ ಪ್ರಮುಖವಾದ ಕಾವ್ಯಗಳಾಗಿವೆ. ಇವು ಸಾಂಗತ್ಯ ಛಂದಸ್ಸಿನಲ್ಲಿವೆ ನಿಜಗುಣ ಶಿವಯೋಗಿಯು ಅನೇಕ ಗ್ರಂಥಗಳನ್ನು ರಚಿಸಿದನು. ಅದರಲ್ಲಿ 'ವಿವೇಕ ಚಿಂತಾಮಣಿ' ಒಂದು ಅಪೂರ್ವವಾದ ಗ್ರಂಥವಾಗಿದೆ. ರಸರತ್ನಾಕರ ಮತ್ತು ಶಾರದಾವಿಲಾಸ ಎಂಬ ಎರಡು ಅಲಂಕಾರ ಗ್ರಂಥಗಳು ಪ್ರಕಟವಾದುವು.

ಹದಿನೇಳನೇ ಶತಮಾನದಲ್ಲಿ ಚಿಕ್ಕದೇವರಾಜ ಒಡೆಯರ ಸಾಹಿತ್ಯ ಪ್ರೋತ್ಸಾಹ ಅನುಪಮವಾದುದು. ಈ ಒಡೆಯರ ಕಾಲದಲ್ಲಿ ತಿರುಮಲಾರ್ಯ, ಚಿಕುಪಾಧ್ಯಾಯ, ಸಂಚಿಯ ಹೊನ್ನಮ್ಮ ಸಿಂಗಾರಾರ್ಯ ಮುಂತಾದವರು ಅನೇಕ ಕೃತಿಗಳನ್ನು ರಚಿಸಿದರು. ಒಬ್ಬೊಬ್ಬ ಕವಿಯು ಹೆಚ್ಚಿನ ಸಂಖ್ಯೆಯಲ್ಲಿ ಕೃತಿಗಳನ್ನು ರಚಿಸಿರುವುದು ಕಂಡುಬರುತ್ತದೆ. ಅರಸರ ಆಶ್ರಯದಲ್ಲಿ ಇಲ್ಲದೆ ಸ್ವತಂತ್ರವಾಗಿ ಕೃತಿ ರಚನೆ ಮಾಡಿದ ಲಕ್ಷ್ಮೀಶ ಕವಿ ಮತ್ತು ರಂಗನಾಥ (ಮಹಲಿಂಗರಂಗ) ಎಂಬ ಕವಿಗಳು ಕ್ರಮವಾಗಿ ಜೈಮಿನಿ ಭಾರತ ಮತ್ತು ಅನುಭವಾಮೃತ ಎಂಬ ಕಾವ್ಯಗಳನ್ನು ರಚಿಸಿದರು. ಸರ್ವಜ್ಞ ಕವಿಯು ಇದೇ ಕಾಲದಲ್ಲಿದ್ದು ವಚನಗಳನ್ನು ತ್ರಿಪದಿ ರೂಪದಲ್ಲಿ ರಚಿಸಿದನು. ಭಟ್ಟಾಕಳಂಕ ಎಂಬ ಶಾಸ್ತ್ರಕಾರನು 'ಶಬ್ದಾನುಶಾಸನ' ಎಂಬ ಕನ್ನಡ ವ್ಯಾಕರಣ ಗ್ರಂಥವನ್ನು ಸಂಸ್ಕೃತದಲ್ಲಿ ರಚಿಸಿದನು.

ಹದಿನೆಂಟನೆ ಶತಮಾನದಲ್ಲಿ ವೆಂಕಣ್ಣನೆಂಬಾತನು ಅನೇಕ ಕಾವ್ಯಗಳನ್ನು ರಚಿಸಿದನು. 'ಹನುಮದ್ವಿಲಾಸ', 'ಇಂದಿರಾಭ್ಯುದಯ', 'ರಾಮಾಯಣ' ಗಳನ್ನು ಷಟ್ಪದಿಯಲ್ಲಿ ರಚಿಸಿದ್ದಾನೆ. ಹತ್ತೊಂಬತ್ತನೆ ಶತಮಾನದಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರ ಸಾಹಿತ್ಯ ಪ್ರೀತಿಯಿಂದಾಗಿ ಅನೇಕರು ಕಾವ್ಯ ರಚನೆ ಮಾಡಿದ್ದಾರೆ. ಒಡೆಯರ ಹೆಸರಿಲ್ಲಿ 'ಕೃಷ್ಣರಾಜ ವಾಣಿವಿಲಾಸ ಭಾರತ' ಮುಂತಾದ ಕೃತಿಗಳಿವೆ. ಕೆಂಪುನಾರಾಯಣ ಎಂಬಾತನು ಮುದ್ರಾಮಂಜೂಷ ಎಂಬ ಗದ್ಯ ರಚನೆಯನ್ನು ಮಾಡಿದನು. ಇದು ಹೊಸಗನ್ನಡದ ಮೊತ್ತಮೊದಲ ಕೃತಿ ಎಂಬ ಕೀರ್ತಿಯನ್ನು ಪಡೆದಿದೆ. ಇದೇ ಶತಮಾನದಲ್ಲಿ ಬಸವಪ್ಪ ಶಾಸ್ತ್ರಿಗಳು ನಾಟಕ ರಚನೆ ಮಾಡಿದರು. ಇದು ಹೊಸಗನ್ನಡದ ಮೊತ್ತಮೊದಲ ಕೃತಿ ಎಂಬ ಕೀರ್ತಿಯನ್ನು ಪಡೆದಿದೆ. ಇದೇ ಶತಮಾನದಲ್ಲಿ ಬಸವಪ್ಪ ಶಾಸ್ತ್ರಿಗಳು ನಾಟಕ ರಚನೆ ಮಾಡಿದರು. ಇಲ್ಲಿಂದ ಮುಂದೆ

ಆಧುನಿಕ ಯುಗ ಪ್ರಾರಂಭವಾಯಿತು. ಇಂಗ್ಲಿಷ್ ಸಾಹಿತ್ಯದ ಪರಿಚಯವಾಗಿ ಅಲ್ಲಿರುವ ಸಾಹಿತ್ಯ ಪ್ರಕಾರಗಳು ಕನ್ನಡದಲ್ಲಿ ಗೋಚರಿಸಲಾರಂಭಿಸಿದವು. ವೈವಿಧ್ಯಮಯ ಸಾಹಿತ್ಯ ಸೃಷ್ಟಿಯು ನಡೆಯಿತು. ಇಪ್ಪತ್ತನೆಯ ಶತಮಾನವು ಹೊಸಗನ್ನಡದ ಚಿನ್ನದ ಯುಗ ಎಂಬ ಕೀರ್ತಿಗೆ ಪಾತ್ರವಾಗಿದೆ. ಇಂದು ಕನ್ನಡ ಸಾಹಿತ್ಯವು ವಿಶ್ವ ಸಾಹಿತ್ಯಕ್ಕೆ ಉತ್ತಮ ಕಾಣಿಕೆಗಳನ್ನು ನೀಡಿದೆ ಎಂದು ಧೈರ್ಯವಾಗಿ ಹೇಳಬಹುದು.

## 2.5 ಕನ್ನಡ ಮತ್ತು ಸಂಸ್ಕೃತ ಸಂಬಂಧ

ಸಂಸ್ಕೃತ ಮತ್ತು ಕನ್ನಡ ಇವೆರಡರ ಸಂಬಂಧವನ್ನು ಕೆಲವರು ತಾಯಿ-ಮಕ್ಕಳ ಸಂಬಂಧವೆಂದೂ, ಸಾಕು ತಾಯಿ-ಮಗಳ ಸಂಬಂಧವೆಂದೂ ಹೇಳುತ್ತಾರೆ. ಪ್ರಾಚೀನ ಕಾಲದಿಂದ ಸುಮಾರು ೧೯ನೇ ಶತಮಾನದ ಮಧ್ಯಭಾಗದವರೆಗೂ ಕನ್ನಡವು ಸಂಸ್ಕೃತದಿಂದ ಹುಟ್ಟಿದ ಭಾಷೆಯೆಂದು ತಿಳಿಯಲಾಗಿತ್ತು. ಇದಕ್ಕೆ ಕಾರಣವೆಂದರೆ ಕನ್ನಡ ಕವಿಗಳು ಪ್ರಯೋಗಿಸುತ್ತಿದ್ದ ಸಂಸ್ಕೃತ ಶಬ್ದಗಳ ಪ್ರಮಾಣವೇ ಆಗಿತ್ತು. ಆಗ ಮಾತ್ರವಲ್ಲ ಈಗಲೂ ಕೂಡ ಶಬ್ದಗಳ ದೃಷ್ಟಿಯಿಂದ ವಿವೇಚಿಸಿದಾಗ ಸಾಂಸ್ಕೃತಿಕ ಕ್ಷೇತ್ರದಲ್ಲಿ ಸಂಸ್ಕೃತ ಶಬ್ದಗಳಿಲ್ಲದೆ ಏನು ನಡೆಯುವಂತಿಲ್ಲ. ಆದರೆ ಭಾಷಾ ವಿಜ್ಞಾನಿಗಳು ನಡೆಸಿದ ಸಂಶೋಧನೆಯ ಪರಿಣಾಮವಾಗಿ ಕನ್ನಡ ಮತ್ತು ಸಂಸ್ಕೃತಗಳೆರಡೂ ಬೇರೆ ಬೇರೆ ಭಾಷಾ ಪರಿವಾರಗಳಿಗೆ ಸೇರಿದ ಭಾಷೆಗಳೆಂಬುದು ದೃಢಪಟ್ಟಿತು. ಸಂಸ್ಕೃತವು ಇಂಡೋ-ಆರ್ಯನ್ ಭಾಷಾವರ್ಗಕ್ಕೆ ಸೇರಿದುದೆಂದೂ, ಕನ್ನಡವು ದ್ರಾವಿಡ ಭಾಷಾ ವರ್ಗಕ್ಕೆ ಸೇರಿದುದೆಂದೂ ತಿಳಿದು ಬಂದಿತು. ಸಂಶೋಧನೆಯ ಆಧಾರದ ಮೇಲೆ ತೀರ್ಮಾನವಾದ ಸಂಗತಿಯನ್ನು ಭಾವನಾತ್ಮಕ ಹೇಳಿಕೆಗಳ ಮೂಲಕ ನಿರಾಕರಿಸಲಾಗುವುದಿಲ್ಲ. ಹಾಗಾದರೆ ಹಿಂದೆ ಈ ಎರಡು ಭಾಷೆಗಳ ಸಂಬಂಧವನ್ನು ತಾಯಿ ಮಕ್ಕಳ ಸಂಬಂಧವೆಂದು ಏಕೆ ನಂಬಿದರು ಎಂಬುದನ್ನು ಈಗ ನೋಡೋಣ.

ಕನ್ನಡ ಸಾಹಿತ್ಯವು ಸಂಸ್ಕೃತ ಸಾಹಿತ್ಯವನ್ನು ಆಧಾರವಾಗಿಟ್ಟುಕೊಂಡು ಬೆಳೆಯಿತು. ಶಾಸನಗಳಲ್ಲಿಯೂ ಸಂಸ್ಕೃತ ಭಾಷಾ ಪ್ರಯೋಗವನ್ನು ನೋಡುತ್ತೇನೆ. ಕನ್ನಡದಲ್ಲಿ ವ್ಯಾಕರಣ ಗ್ರಂಥಗಳನ್ನು ಅಲಂಕಾರ ಗ್ರಂಥಗಳನ್ನು ಸಂಸ್ಕೃತವನ್ನೇ ಆದರ್ಶವನ್ನಾಗಿಟ್ಟುಕೊಂಡು, ಅನುಸರಿಸಿಕೊಂಡು ಬರೆದರು. ಬಹುಪಾಲು ಕನ್ನಡ ಶಾಸ್ತ್ರ ಗ್ರಂಥಗಳು ಸಂಸ್ಕೃತದ ಅನುವಾದಗಳಾಗಿವೆ. ಬಹಳ ಹಿಂದಿನಿಂದಲೂ ಸಂಸ್ಕೃತವು ಕನ್ನಡ ಸಾಹಿತ್ಯ ಸಂಸ್ಕೃತಿಯ ಮೇಲೆ ಹೆಚ್ಚು ಪ್ರಭಾವವನ್ನು ಬೀರಿತು. ನಾಗರಿಕತೆ ಬೆಳೆದಂತೆ ಭಾಷಾ ಮಾಧ್ಯಮ ಶಕ್ತಿಶಾಲಿಯಾಯಿತು. ಹಾಗೆ ಆಗಲು ಕನ್ನಡಕ್ಕೆ ಸಂಸ್ಕೃತದ ಸಹಾಯ ಬೇಕಾಯಿತು. ಪಾರಿಭಾಷಿಕ ಶಬ್ದಗಳು ಬೇಕಾದುವು. ಸಂಸ್ಕೃತ ಶಬ್ದಗಳನ್ನು ದ್ರಾವಿಡ ಭಾಷೆಗಳೆಲ್ಲವೂ ಧಾರಾಳವಾಗಿ ಸ್ವೀಕರಿಸಿವೆ. ತಮಿಳು ಸ್ವೀಕರಿಸಿರುವುದು ಸ್ವಲ್ಪ ಕಡಿಮೆ ಎನ್ನಬಹುದು. ಕನ್ನಡದ ಕವಿಗಳೇನಕರು ಉಭಯ ಭಾಷಾ ವಿಶಾರದರಾಗಿದ್ದರು. ಕೆಲವರು ಚತುರ್ಭಾಷಾ ಪಂಡಿತರೂ ಆಗಿದ್ದರು. ಕನ್ನಡ ಸಾಹಿತ್ಯದ ಪ್ರಾರಂಭದ ಕವಿಗಳು ಜೈನರು. ಅವರು ಸಂಸ್ಕೃತ, ಪ್ರಾಕೃತಗಳಲ್ಲಿ ಪಂಡಿತರಾಗಿದ್ದರು. ಕನ್ನಡದ ಆಚಾರ್ಯ ಪುರುಷರಲ್ಲೊಬ್ಬರಾದ ತ.ಸು. ವೆಂಕಣ್ಣಯ್ಯನವರು 'ಕನ್ನಡದಲ್ಲಿ ಕೃತಿರಚನೆ ನಡೆಯುವ ವೇಳೆಗೆ ಸಂಸ್ಕೃತವು ಭಾರತದ ಸಂಸ್ಕೃತಿಯ ಭಾಷೆಯಾಗಿತ್ತು ಸಂಸ್ಕೃತ ಸಾಹಿತ್ಯವೇ ಕನ್ನಡ ಸಾಹಿತ್ಯದ ರೂಪಣಕ್ಕೆ ಪ್ರೇರಕವೂ, ಪೋಷಕವೂ ಆಗಿತ್ತೆಂದು ಹೇಳಬಹುದು. ಕಾವ್ಯಕ್ಕೆ ತಕ್ಕ ವಿಷಯವಾವುದು, ಅದನ್ನು ಕಾವ್ಯದಲ್ಲಿ ಯಾವ ರೀತಿ ನಿರೂಪಿಸಬೇಕು ಎಂಬುದನ್ನು ಕನ್ನಡ ಕವಿಗಳು ಸಂಸ್ಕೃತ ಕವಿಗಳಿಂದ ಕಲಿತರು. ಕೆಲವರು ಸಂಸ್ಕೃತ ಪ್ರಾಕೃತ ಗ್ರಂಥಗಳನ್ನು ಕನ್ನಡಕ್ಕೆ ಪರಿವರ್ತಿಸಿದರು ಮತ್ತು ಕೆಲವರು ಕಾವ್ಯವಸ್ತುವನ್ನು ಸಂಸ್ಕೃತದಿಂದ

ಸಂಗ್ರಹಿಸಿ ಹೊಸ ಕಾವ್ಯಗಳನ್ನು ರಚಿಸಿದರು. ಸಂಸ್ಕೃತ ಸಾಹಿತ್ಯವು ಕನ್ನಡ ಸಾಹಿತ್ಯಕ್ಕೆ ಸಾಹಿತ್ಯ ಸಾಮಗ್ರಿಯ ಭಂಡಾರವಾದದ್ದು ಮಾತ್ರವಲ್ಲದೆ ಕನ್ನಡ ಕವಿಗಳಿಗೆ ಕನ್ನಡಿಯೂ ದೀವಿಗೆಯೂ ಆಯಿತು' ಎಂದು ಹೇಳಿದ್ದಾರೆ. ಕ್ರಿ.ಶ. ಆರೇಳನೆಯ ಶತಮಾನದ ಹೊತ್ತಿಗೆ ಸಂಸ್ಕೃತ ಸಾಹಿತ್ಯದಲ್ಲಿ ವ್ಯಾಸವಾಲ್ಮೀಕಿಗಳ ಭಾಸ ಕಾಳಿದಾಸರ ಕಾಲವು ಮುಗಿದು ಬಾಣ, ಮಾಘರ ಕಾಲ ಸನ್ನಿಹಿತವಾಗಿತ್ತು. ಅರ್ಥ ಚಮತ್ಕಾರ ಮುಂತಾದುವುಗಳಿಗೆ ಮನ್ನಣೆಯು ದೊರೆಯುತ್ತಿತ್ತು. ಕನ್ನಡ ಕವಿಗಳೂ ಇದನ್ನು ಅನುಸರಿಸಿದರು.

ಕನ್ನಡದ ಚಂಪೂ ಕವಿಗಳು ಸಂಸ್ಕೃತ ಮಹಾಭಾರತ, ರಾಮಾಯಣ, ಪುರಾಣಗಳು, ಮಹಾಕಾವ್ಯಗಳ ಪ್ರಭಾವಕ್ಕೆ ಸಿಕ್ಕಿ ಸಂಸ್ಕೃತ ಛಂದಸ್ಸನ್ನು ಬಳಸಿಕೊಂಡರು. ಆಗಿನ ಶಾಸನಗಳಲ್ಲಿಯೂ ಸಂಸ್ಕೃತಕ್ಕೆ ಪ್ರಾಧಾನ್ಯವಿದ್ದಿತು. ಕಾವ್ಯಗಳಲ್ಲಿ ಕನ್ನಡ ಛಂದಸ್ಸು ಅತಿ ವಿರಳವಾಗಿತ್ತು ಸಂಸ್ಕೃತದ ಪ್ರಭಾವದಿಂದ ಮೊದಲು ಮುಕ್ತರಾದ ವಚನಕಾರರು ದೇಶೀಯ ಶೈಲಿ ಛಂದಸ್ಸುಗಳನ್ನು ಬಳಸಿಕೊಂಡರು. ಅನಂತರ ಕವಿಗಳು ಕನ್ನಡ ಛಂದಸ್ಸಿನ ಕಡೆ ತಿರುಗಿದರು. ಅಚ್ಚಗನ್ನಡದಲ್ಲಿ ಬರೆಯಬೇಕೆಂದು ತೀರ್ಮಾನಿಸಿದವರೂ ಇದ್ದಾರೆ. ಕನ್ನಡದಲ್ಲಿ ಎಲ್ಲವನ್ನು ಹೇಳಬಹುದಲ್ಲ ಸಂಸ್ಕೃತದೊಳಿನ್ನೇನು ಎಂದವರೂ ಇದ್ದಾರೆ. ಸಂಸ್ಕೃತವು ಕನ್ನಡವನ್ನು ಕುಬ್ಜಗೊಳಿಸಲು ಯತ್ನಿಸಲಿಲ್ಲ. ಕನ್ನಡವೂ ಬೆನ್ನುಮೂಳೆ ಇಲ್ಲದವರಂತೆ ವರ್ತಿಸಿಲ್ಲ. ಎಷ್ಟು ಬೇಕೋ ಯಾವುದು ಬೇಕೋ ಅದನ್ನು ಮಾತ್ರ ಕನ್ನಡ ತೆಗೆದುಕೊಂಡಿದೆ.

ಅದು ಏನೇ ಇರಲಿ, ಒಂದು ಭಾಷೆಗೆ ಅತ್ಯಗತ್ಯವಾದ ಶಬ್ದಗಳು ಯಾವತ್ತೂ ದೇಶ್ಯಗಳೇ ಆಗಿರುತ್ತವೆ. ಯಾವ ಕಾರಣದಿಂದಲೂ ಅವು ಅನ್ಯದೇಶ್ಯಗಳು ಆಗಿರುವುದಿಲ್ಲ. ನಾಮ ಪದಗಳು ಕೆಲವು ಅನ್ಯಭಾಷೆಗಳಿಂದ ಬಂದಿರಬಹುದು ಎಲ್ಲವೂ ಅಲ್ಲ. ನಮ್ಮ ದೇಹದ ಅಂಗೋಪಾಂಗಗಳ ಹೆಸರುಗಳು, ಸಂಬಂಧ ಸೂಚಕ ಶಬ್ದಗಳು, ಸ್ವದೇಶೀ ಪ್ರಾಣಿ ಪಕ್ಷಿಗಳ ಹೆಸರುಗಳು, ಗಿಡಮರ ಬಳ್ಳಿಗಳ ಹೆಸರುಗಳು, ಸರ್ವನಾಮಗಳು, ಸಂಖ್ಯಾವಾಚಕಗಳು, ಧಾತುಗಳು ಇತ್ಯಾದಿಗಳು ಯಾವಾಗಲೂ ಭಾಷೆಯ ಸ್ವಂತ ಶಬ್ದಗಳೇ ಆಗಿರುತ್ತವೆ. ನಾಗರಿಕತೆಗೆ ಸಂಬಂಧಿಸಿದಂತೆ ಶಾಸ್ತ್ರ ವಿಚಾರಗಳನ್ನು ಹೇಳುವಾಗ ಅನ್ಯದೇಶ್ಯಗಳು ಬಂದು ಸೇರುತ್ತವೆ. ಅದರಲ್ಲಿಯೂ ಸಮೃದ್ಧವಾದ ಮುಂದುವರಿದ ಭಾಷೆಗಳಿಂದ ಅನ್ಯದೇಶ್ಯ ಶಬ್ದಗಳು ಸ್ವೀಕೃತವಾಗುತ್ತವೆ. ಅನ್ಯದೇಶ್ಯಗಳು ಸಾಮಾನ್ಯವಾಗಿ ಕೆಲವು ನಾಮಪದಗಳು, ಗುಣವಾಚಕಗಳು, ಕ್ರಿಯಾವಿಶೇಷಣಗಳು ಇವುಗಳ ಸಂಖ್ಯೆಯು ಕಡಿಮೆಯಾಗಿರುತ್ತದೆ. ಸರ್ವನಾಮಗಳು ಮತ್ತು ಅವ್ಯಯ ಕಡ್ಡಾಯವಾಗಿ ಸ್ವೀಕೃತ ಆಗುವುದಿಲ್ಲ ಎಂದರೂ ತಪ್ಪಾಗಲಾರದು. ಅನ್ಯ ಭಾಷೆಯ ಶಬ್ದಗಳು ಪ್ರಬಲ ಆಕರ್ಷಣೆಯನ್ನು ಉಂಟು ಮಾಡಿದರೆ ಅವುಗಳೇ ಹೆಚ್ಚಾಗಿ ರೂಢಿಗೆ ಬಂದು ದೇಶ್ಯಗಳು ಅಳಿದು ಹೋಗುವುದು ಕಂಡು ಬರುತ್ತದೆ. ಪರಭಾಷೆಯ ಪ್ರಭಾವವು ವ್ಯಾಕರಣ ಪ್ರಕ್ರಿಯೆಯ ಮೇಲೆ ಅಷ್ಟಾಗಿ ಉಂಟಾಗುವುದಿಲ್ಲ. ಈ ವಿಚಾರವನ್ನು ನಿದರ್ಶನ ಪೂರ್ವಕವಾಗಿ ಇಲ್ಲಿ ನೋಡಬಹುದು.

| ಶಬ್ದಗಳು | ಕನ್ನಡ | ತಮಿಳು | ತೆಲುಗು | ಸಂಸ್ಕೃತ |
|---|---|---|---|---|
| ದೇಹದ ಅಂಗಗಳು | ಕಯ್ | ಕಯ್ | ಕಯ್(ಚೆಯ್) | ಹಸ್ತ |
| | ತಲೆ | ತಲೈ | ತಲ | ಶಿರ |
| | ಬೆರಲ್ | ವಿರಲ್ | ವ್ರೇಲು | ಅಂಗುಲಿ |
| ಸಂಬಂಧವಾಚಕ ಅಣ್ಣ | ಅಣ್ಣ | ಅಣ್ಣ | ಭ್ರಾತೃ | |

| | | | | |
|---|---|---|---|---|
| | ತಾಯಿ | ತಾಯ್ | ತಲ್ಲಿ (ತಾಯ್) | ಮಾತೃ |
| | ತಂದೆ | ತಂದೈ | ತಂಡ್ರಿ | ಪಿತೃ |
| ಸರ್ವನಾಮ | ನೀನು | ನೀನ್ | ನೂವು | ತ್ವಂ |
| | ಅದು | ಅದು | ಅದಿ | ತತ್ |
| | ನಾನು | ಯಾನ್ (ನಾನ್) | ನೇನು | ಅಹಂ |
| ಸಂಖ್ಯಾವಾಚಕ | ಎರಡು | ಇರಂಡು | ರೆಂಡು | ದ್ವಿ |
| | ಮೂರು | ಮೂನ್ರು | ಮೂಡು | ತ್ರಿ |
| | ನೂರು | ನೂರು | ನೂರು | ಶತ |
| ಪ್ರಾಣಿಗಳು | ಹುಲಿ | ಪುಲಿ | ಪುಲಿ | ವ್ಯಾಘ್ರ |
| | ಇಲಿ | ಎಲಿ | ಎಲುಕು | ಮೂಷಕ |
| | ಹಾವು (ಪಾವು) | ಪಾಂಬು | ಪಾಮು | ಸರ್ಪ |
| ಪದಾರ್ಥಗಳು | ಹಾಲು (ಪಾಲು) | ಪಾಲ್ | ಪಾಲು | ಕ್ಷೀರ |
| | ಉಪ್ಪು | ಉಪ್ಪು | ಉಪ್ಪು | ಲವಣ |
| | ಬಾಗಿಲು | ವಾಯಿಲ್ | ವಾಕಿಲಿ | ಕವಾಟ |
| ಧಾತುಗಳು | ಹೋಗು (ಪೋಗು) | ಪೋ | ಪೋ | ಗಮ್ |
| | ತಿನ್ನು | ತಿನ್ | ತಿನು | ಅದ್ |
| | ಪೊಗಳ್ | ಪುಗಳ್ | ಪೊಗಡು | ಸ್ತು |
| | ಬಿಡು | ವಿಡು | ವಿಡು | ತ್ಯಜ್ |

ಮೇಲಿನ ಪಟ್ಟಿಯನ್ನು ನೋಡಿದರೆ ಕನ್ನಡ, ತಮಿಳು, ತೆಲುಗು, ಭಾಷೆಗಳಲ್ಲಿ ಒಂದೇ ಸ್ವರೂಪದ ಶಬ್ದಗಳಿವೆ. ಆದರೆ ಕಡೆಯಲ್ಲಿರುವ ಸಂಸ್ಕೃತ ಶಬ್ದಗಳು ಸಂಪೂರ್ಣವಾಗಿ ಬೇರೆಯಾಗಿರುವುದು ಕಂಡು ಬರುತ್ತದೆ. ಸಂಸ್ಕೃತ ಶಬ್ದಗಳು ಅಸ್ಪಷ್ಟವಾದ ಸಾಮ್ಯವನ್ನು ಕೂಡ ಹೊಂದಿಲ್ಲದೆ ಇರುವುದು ಒಂದು ಅಂಶವನ್ನು ಸ್ಪಷ್ಟಪಡಿಸುತ್ತದೆ. ಅದೆಂದರೆ ಕನ್ನಡ, ತಮಿಳು, ತೆಲುಗು, ಮಾಲಯಾಳಂ (ಇದು ತಮಿಳಿನ ಜ್ಞಾತಿಯೇ ಆಗಿದೆ) ಭಾಷೆಗಳು ಒಂದು ಪರಿವಾರಕ್ಕೆ ಸೇರುತ್ತವೆ. ಸಂಸ್ಕೃತವು ಇನ್ನೊಂದು ಪರಿವಾರಕ್ಕೆ ಸೇರುತ್ತದೆ ಎನ್ನುವುದು. ಈ ನಿದರ್ಶನವು ಶಬ್ದಗಳ ಬಗ್ಗೆ ಮಾತ್ರವಾದರೆ, ವ್ಯಾಕರಣಾಂಶಗಳನ್ನು ಮುಂದೆ ನೋಡಬಹುದು.

ವ್ಯಾಕರಣ ಪ್ರಕ್ರಿಯೆಗಳು

೧. ಲಿಂಗವಿವಕ್ಷೆ: ದ್ರಾವಿಡ ಭಾಷೆಗಳಲ್ಲಿ ಲಿಂಗವಿವಕ್ಷೆಯು ಶಬ್ದವನ್ನು ಅನುಸರಿಸದೆ ಅರ್ಥವನ್ನು ಮಾತ್ರ ಅನುಸರಿಸುತ್ತದೆ. ಅಂದರೆ ಪುರುಷರು ಪುಲ್ಲಿಂಗಕ್ಕೂ ಸ್ತ್ರೀಯರು ಸ್ತ್ರೀಲಿಂಗಕ್ಕೂ ನಿರ್ಜೀವ

ವಸ್ತುಗಳು ನಪುಂಸಕ ಲಿಂಗಕ್ಕೂ ಸೇರುತ್ತವೆ. ಬುದ್ಧಿ ಬೆಳೆಯದ ಚಿಕ್ಕ ಮಕ್ಕಳಿಗೂ ಕೂಡ ನಪೂಂಸಕ ಲಿಂಗಕ್ಕೆ ಸೇರುತ್ತವೆ. ಸಂಸ್ಕೃತದಲ್ಲಿ ಶಬ್ದಗಳ ಮೇಲೆ ಲಿಂಗವನ್ನು ಹೇಳಲಾಗುತ್ತದೆ. ಅಂದರೆ ಹೆಂಡತಿಯನ್ನು ಸೂಚಿಸುವ ಸಂಸ್ಕೃತ ಶಬ್ದಗಳು ಹಲವು ಪತ್ನಿ, ಭಾರ್ಯ, ಕಳತ್ರ, ಸತಿ ಇತ್ಯಾದಿ. ಈ ಶಬ್ದಗಳು ಪುಲ್ಲಿಂಗ, ಸ್ತ್ರೀಲಿಂಗ, ನಪ್‌ಲಿಂಗ ಎಂಬ ಮೂರು ವರ್ಗಗಳಿಗೆ ಹಂಚಿ ಹೋಗುತ್ತವೆ.

೨. **ವಚನಗಳು:** ದ್ರಾವಿಡ ಭಾಷೆಗಳಲ್ಲಿ ಏಕವಚನ ಮತ್ತು ಬಹುವಚನ ಎಂಬ ಎರಡು ಬಗೆ ಇದ್ದರೆ ಸಂಸ್ಕೃತದಲ್ಲಿ ಏಕ, ದ್ವಿ ಮತ್ತು ಬಹು ಎಂಬ ಮೂರು ವಚನಗಳಿವೆ.

೩. **ವಿಭಕ್ತಿ:** ದ್ರಾವಿಡ ಭಾಷೆಗಳಲ್ಲಿ ಏಕವಚನ ಮತ್ತು ಬಹುವಚನ ಎರಡಕ್ಕೂ ಒಂದೇ ವಿಧವಾದ ವಿಭಕ್ತಿ ಪ್ರತ್ಯಯಗಳು ಸೇರುತ್ತವೆ. ಸಂಸ್ಕೃತದಲ್ಲಿ ಬೇರೆ ಬೇರೆ ಪ್ರತ್ಯಯಗಳು ಸೇರುತ್ತವೆ.

೪. **ಗುಣವಾಚಕ:** ದ್ರಾವಿಡ ಭಾಷೆಗಳಲ್ಲಿ ಗುಣವಾಚಕಕ್ಕೆ ತರ, ತಮ, ಎಂಬ ದರ್ಜೆಗಳಿಲ್ಲ. ಇಂಗ್ಲಿಷಿನಲ್ಲಿ ಪಾಸಿಟಿವ್, ಕಂಪ್ಯಾರಟಿವ್, ಸೂಪರ್ ಲೇಟಿವ್ ಎಂದು ಇರುವ ಹಾಗೆ ಸಂಸ್ಕೃತದಲ್ಲಿಯೂ ಇವೆ.

೫. **ಕ್ರಿಯಾಪದ:** ಕ್ರಿಯಾಪದಗಳು ಬಹಳ ಮುಖ್ಯವಾದ ವಾಕ್ಯಾಂಗ. ಲಿಂಗ, ವಚನ, ನಿಷೇಧ ಇತ್ಯಾದಿಗಳು ಅವುಗಳ ಮೂಲಕವೇ ತಿಳಿಯುತ್ತವೆ. ದ್ರಾವಿಡ ಭಾಷೆಗಳಲ್ಲಿ ಪ್ರತ್ಯೇಕವಾದ ನಿಷೇಧ ರೂಪದ ಕ್ರಿಯಾಪದಗಳಿವೆ. ಸಂಸ್ಕೃತದಲ್ಲಿ ಆ ವ್ಯವಸ್ಥೆ ಇಲ್ಲ.

೬. **ಪ್ರತ್ಯಯಗಳು:** ಕೃತ್ ಪ್ರತ್ಯಯಗಳು, ತದ್ಧಿತ ಪ್ರತ್ಯಯಗಳು ದ್ರಾವಿಡ ಭಾಷೆಗಳಿಗೆ ಬೇರೆ ಮತ್ತು ಸಂಸ್ಕೃತಕ್ಕೆ ಬೇರೆ ಆಗಿವೆ.

೭. **ಪ್ರಯೋಗ:** ಸಂಸ್ಕೃತದಲ್ಲಿ ಕರ್ಮಣಿ ಪ್ರಯೋಗ (ಪ್ಯಾಸಿವ್ ವಾಯ್ಸ್) ತುಂಬಾ ಸಹಜವಾಗಿರುವುದನ್ನು ನೋಡಬಹುದು. ದ್ರಾವಿಡ ಭಾಷೆಗಳಲ್ಲಿ ಕರ್ಮಣಿ ಪ್ರಯೋಗವಿಲ್ಲ ಒಂದು ಪಕ್ಷ ಕಂಡು ಬಂದರೆ ಅದು ಸಂಸ್ಕೃತದ ಅನುಕರಣೆಯಿಂದ ಬಂದಿರುತ್ತದೆ.

೮. **ಅಕ್ಷರಗಳು:** ಸಂಸ್ಕೃತದಲ್ಲಿ ಎ, ಒ, ಱ, ೞ, ಳ ಎಂಬ ವರ್ಣಗಳಿಲ್ಲ. ಅವುಗಳು ದ್ರಾವಿಡ ಭಾಷೆಗಳಲ್ಲಿವೆ. ಸಂಸ್ಕೃತದಲ್ಲಿ ಋ, ೠ, ಌ ೡ, ಶ, ಷ ಎಂಬ ವರ್ಣಗಳಿವೆ. ದ್ರಾವಿಡ ಭಾಷೆಗಳಲ್ಲಲ್ಲಿ ಮಹಾಪ್ರಾಣ ಅಕ್ಷರಗಳು ದ್ರಾವಿಡ ಭಾಷೆಗಳಲ್ಲಿ ಇಲ್ಲವೆಂದು ವಿದ್ವಾಂಸರು ಹೇಳುತ್ತಾರೆ. ಈಗ ಕಂಡು ಬರುವ ಮಹಾಪ್ರಾಣಗಳು ಸಂಸ್ಕೃತದಿಂದ ಬಂದಿವೆ ಎನ್ನುತ್ತಾರೆ.

ಸಂಸ್ಕೃತ ಶಬ್ದಗಳು ಕನ್ನಡದಲ್ಲಿರುವುದನ್ನು ಮುಖ್ಯವಾಗಿ ಪರಿಗಣಿಸಿದುದು ಕೆಲವರನ್ನು ತಮ್ಮದೇ ಆದ ತೀರ್ಮಾನಕ್ಕೆ ಬರುವಂತೆ ಮಾಡಿತು. ಶಬ್ದಗಳನ್ನೇ ನೋಡಿದರೆ ಕನ್ನಡದಲ್ಲಿರುವಷ್ಟು ಸಂಸ್ಕೃತ ಶಬ್ದಗಳು ತೆಲುಗಿನಲ್ಲಿಲ್ಲ. ತೆಲುಗಿನಲ್ಲಿರುವಷ್ಟು ತಮಿಳಿನಲ್ಲಿ ಇಲ್ಲ. ಪ್ರಾಚೀನ ಸಾಹಿತ್ಯವನ್ನು ನೋಡಿದರೆ ಇನ್ನೂ ಕಡಿಮೆಸಂಸ್ಕೃತ ಶಬ್ದಗಳಿರುವುದು ಕಂಡುಬರುತ್ತದೆ. ದ್ರಾವಿಡ ಭಾಷೆಗಳು ಪ್ರಾಚೀನ ಕಾಲದಿಂದಲೂ ತಮ್ಮದೇ ಆದ ಸಾಹಿತ್ಯ ಸಂಸ್ಕೃತಿಯನ್ನು ಪೋಷಿಸಿಕೊಂಡು ಬಂದಿವೆ. ಮೇಲೆ ನೋಡಿದ

ಹತ್ತಾರು ವಿಷಯಗಳ ಪರಿಶೀಲನೆಯ ಪರಿಣಾಮವಾಗಿ ಹೇಳಬಹುದಾದುದು ಏನೆಂದರೆ ಕನ್ನಡವು ಸಂಸ್ಕೃತಕ್ಕಿಂತ ತೀರ ಭಿನ್ನವಾಗಿ ಇರುವುದರಿಂದ ಅದು ಸಂಸ್ಕೃತ ಜನ್ಯವಲ್ಲ ಎಂದು ಹೇಳಬಹುದು. ನಿತ್ಯದ ಜೀವನ ಸಾಗಲು ಸಂಸ್ಕೃತ ಶಬ್ದಗಳು ಬೇಕಾಗಿಲ್ಲ ಎನ್ನುವುದೂ ಇಲ್ಲಿ ಗಮನಿಸಬೇಕಾದ ಅಂಶವಾಗಿದೆ.

## 2.6 ಕನ್ನಡ ಭಾಷೆಯ ವಿವಿಧ ಹಂತಗಳು

ಒಂದು ಜೀವಂತ ಭಾಷೆಯು ಪರಿವರ್ತನೆಗೆ ಒಳಗಾಗುವುದು ಸಹಜ ಕಾಲದಿಂದ ಕಾಲಕ್ಕೆ ಪ್ರೇರಣೆ, ಹೊರಗಿನ ಪ್ರಭಾವದಿಂದ ಭಾಷೆ ಬದಲಾಗುತ್ತದೆ. ಕನ್ನಡ ಭಾಷೆಯ ಪ್ರಯೋಗವನ್ನು ನೋಡಿದರೆ ಅದು ಕೆಲವು ಹಂತಗಳನ್ನು ದಾಟಿ ಬಂದಿದೆ ಎನ್ನುವುದು ಗೊತ್ತಾಗುತ್ತದೆ.

೧. ಪೂರ್ವದ ಹಳಗನ್ನಡ (ಪೂ.ಹ.ಗ)
೨. ಹಳಗನ್ನಡ (ಹ.ಗ)
೩. ನಡುಗನ್ನಡ (ನ. ಗ)
೪. ಹೊಸಗನ್ನಡ (ಹೊ.ಗ)

ಈ ವಿಚಾರವಾಗಿ ಚರ್ಚಿಸಿದವರಲ್ಲಿ ಕಿಟ್ಟೆಲ್ ಮತ್ತು ರೈಸ್ ಅವರು ಪ್ರಮುಖರು. ವಿದೇಶಿಯರು ಈ ವಿಚಾರದಲ್ಲಿ ತಾಳಿದ ಆಸಕ್ತಿಯು ಪ್ರಶಂಸನೀಯವಾದುದು. ಆದರೆ ಒಂದು ವ್ಯತ್ಯಾಸವಿದೆ. ರೈಸ್ ಅವರು ಪೂರ್ವದ ಹಳಗನ್ನಡ, ಹಳಗನ್ನಡ, ಹೊಸಗನ್ನಡ ಎಂದು ಮೂರೇ ವಿಭಾಗ ಮಾಡುತ್ತಾರೆ. ಕಿಟ್ಟೆಲ್ ಅವರು ಹಳಗನ್ನಡ, ಮಧ್ಯಕಾಲದ ಕನ್ನಡ, ಹೊಸಗನ್ನಡ ಎಂದು ಮೂರು ವಿಭಾಗ ಮಾಡುತ್ತಾರೆ. ಇಬ್ಬರು ಹೇಳುವ ಕಾಲಮಾನದಲ್ಲಿಯೂ ವ್ಯತ್ಯಾಸಗಳಿವೆ. ಕ್ರಿ.ಶ. ದ ಆದಿಯಿಂದ ಸುಮಾರು ೮೫೦ರ ವರೆಗೆ ಪೂರ್ವದ ಹಳಗನ್ನಡ ಯುಗವೆಂದು ಕರೆಯಲಾಗಿದೆ. ಇದು ಸ್ವಲ್ಪ ತಮಿಳಿನ ಹೋಲಿಕೆಯನ್ನು ಹೊಂದಿದೆ. ಸಂಸ್ಕೃತವನ್ನು ಅನುಸರಿಸಿಕೊಂಡು ಭಾಷಾ ಪ್ರಯೋಗಗಳನ್ನು ನಡೆಸಲಾಗುತ್ತಿತ್ತು. ಇದಕ್ಕೆ ನಿದರ್ಶನವಾಗಿ ಹಲ್ಮಿಡಿ ಶಾಸನವನ್ನು ನೋಡಬಹುದು. ಪೂರ್ವದ ಹಳಗನ್ನಡದಲ್ಲಿ ಕೆಲವು ವಿಶಿಷ್ಟವಾದ ಲಕ್ಷಣಗಳಿವೆ. ಕ್ರಿಯಾಪದಗಳಲ್ಲಿ, ಪ್ರತ್ಯಯಗಳಲ್ಲಿ, ಶಬ್ದರೂಪದಲ್ಲಿ ವ್ಯತ್ಯಾಸಗಳಿವೆ. ಅದನ್ನು ನೀವು ಮುಂದೆ ವಿವರವಾಗಿ ತಿಳಿಯುವಿರಿ. ಹಳಗನ್ನಡವು ಕ್ರಿ.ಶ. ೯ನೇ ಶತಮಾನದ ವೇಳೆಗೆ ತನ್ನದೇ ಆದ ಒಂದು ಪ್ರತ್ಯೇಕ ಸ್ವರೂಪವನ್ನು ಪಡೆದುಕೊಂಡಿತು. ಅಂದರೆ ಪೂರ್ವದ ಹಳಗನ್ನಡದ ಒಂದು ಗುರುತೂ ಇಲ್ಲದೆ ಹೋಯಿತು ಎಂದು ಭಾವಿಸಬಾರದು. ಯಾವಾಗಲೂ ಒಂದು ಹಂತದಿಂದ ಇನ್ನೊಂದು ಹಂತಕ್ಕೆ ಭಾಷೆಯು ಸಂಕ್ರಮಿಸುವುದು ಒಂದೇ ಸಲಕ್ಕೆ ಅಲ್ಲ. ಹಳೆಯದು ಸ್ವಲ್ಪ ಸ್ವಲ್ಪವಾಗಿ ಹಿಂದಕ್ಕೆ ಸರಿಯುತ್ತಾ ಇರುತ್ತದೆ. ಹೊಸದು ಅದೇ ರೀತಿಯಲ್ಲಿ ಹೆಚ್ಚು ಜಾಗವನ್ನು ಪಡೆದುಕೊಳ್ಳುತ್ತಾ ಹೋಗುತ್ತದೆ. ಒಂದು ಕಾಲದ ವೇಳೆಗೆ ಹಳೆಯದು ಪೂರ್ಣವಾಗಿ ಮಾಯವಾಗಿ ಹೊಸದು ಮಾತ್ರ ಉಳಿದುಕೊಳ್ಳುತ್ತದೆ. ಇದು ಕನ್ನಡದ ಎಲ್ಲ ಹಂತಗಳಿಗೂ ಅನ್ವಯಿಸುತ್ತದೆ ಪೂರ್ವದ ಹಳೆಗನ್ನಡವು ಹಳಗನ್ನಡವಾಗಿ ಪರಿವರ್ತನೆಯಾದ ನಂತರ ಸುಮಾರು ಹನ್ನೆರಡನೇ ಶತಮಾನದವರೆಗೆ ಉಳಿದುಕೊಂಡಿತ್ತು. ಅನಂತರ ನಡುಗನ್ನಡದ ಅಂಶಗಳು ಸೇರಲು ಪ್ರಾರಂಭವಾಯಿತು. ಹಳಗನ್ನಡದಲ್ಲಿ ಚಂಪೂ ಕಾವ್ಯಗಳು ರಚಿತವಾಗಿ ಕನ್ನಡದ ಕೀರ್ತಿಯು ಹೆಚ್ಚಿತು. ಕನ್ನಡದ ಸುವರ್ಣಯುಗ ಎನ್ನಿಸಿಕೊಳ್ಳುವ

ಹತ್ತನೆಯ ಶತಮಾನದಲ್ಲಿ ಹಳಗನ್ನಡವೇ ಕವಿಗಳ ಕಾವ್ಯ ಭಾಷೆ ಆಗಿತ್ತು. ಅನಂತರ ಶಿವಶರಣರು ವಚನ ರಚನೆ ಮಾಡುವಾಗ ನಡುಗನ್ನಡದ ಸ್ವರೂಪ ನಿಚ್ಚಳವಾಗ ತೊಡಗಿತು. ಸುಮಾರು ಕ್ರಿ.ಶ. ೧೭೦೦ರ ವರೆಗೂ ನಡುಗನ್ನಡದ ಪ್ರಭಾವ ಹೆಚ್ಚಾಗಿದ್ದಿತು. ದಾಸ ಸಾಹಿತ್ಯದ ಬೆಳವಣಿಗೆಯನ್ನು ಈ ಕಾಲದಲ್ಲಿ ನೋಡಬಹುದು. ಷಟ್ಪದಿ, ಸಾಂಗತ್ಯ ಛಂದಸ್ಸಿನ ಮಹಾಕಾವ್ಯಗಳು ನಡುಗನ್ನಡ ಭಾಷೆಯನ್ನು ಪ್ರತಿನಿಧಿಸುತ್ತವೆ. ಕ್ರಿ.ಶ. ೧೭೦೦ರ ನಂತರ ನಡುಗನ್ನಡವು ನಿದಾನವಾಗಿ ಹೊಸಗನ್ನಡದ ಲಕ್ಷಣವನ್ನು ಕೂಡಿಸಿಕೊಳ್ಳುವುದು ಕಂಡು ಬರುತ್ತದೆ. ಕ್ರಿ.ಶ. ೧೮೨೩ರಲ್ಲಿ ಮುದ್ರಣಗೊಂಡ ಬೈಬಲ್ ಆವೃತ್ತಿಯು ಹೊಸಗನ್ನಡದ ಮೊದಲನೆಯ ಗ್ರಂಥವೆಂದು ತಿಳಿಯಲಾಗಿದೆ. ಅದೇ ಸಮಯದಲ್ಲಿ ಮುದ್ರಾ ಮಂಜೂಷ ಎಂಬ ಕೃತಿಯು ಬೆಳಕಿಗೆ ಬಂದಿತು. ಮುಮ್ಮಡಿ ಭೂಪ ಮನೆ ಮನೆಯ ದೀಪ ಎಂಬ ಖ್ಯಾತಿಯನ್ನು ಸಂಪಾದಿಸಿದ ಕೃಷ್ಣರಾಜ ಒಡೆಯರ ಕಾಲದಲ್ಲಿ ಹೊಸಗನ್ನಡದ ಲಕ್ಷಣಗಳನ್ನು ಹೆಚ್ಚಾಗಿ ಹೊಂದಿದ ಕೃತಿಗಳು ರಚಿತವಾದುವು. ಕ್ರೈಸ್ತ ಗುರುಗಳು ಹೊಸಗನ್ನಡ ವಿಕಾಸಗೊಳ್ಳಲು ಕಾರಣರಾಗಿದ್ದಾರೆ. ಅವರು ಮತ ಪ್ರಚಾರದ ಉದ್ದೇಶದಿಂದ ಹೊರಟರೂ ಕೂಡ ಪರೋಕ್ಷವಾಗಿ ಕನ್ನಡ ಭಾಷೆಯ ಅಭಿವೃದ್ಧಿಗೂ ಕಾರಣರಾದರು. ಕ್ರಿ.ಶ. ೧೯೦೦ರ ಮೊದಲನೆಯ ದಶಕ ಕಳೆದ ನಂತರ ಹೊಸಗನ್ನಡ ಕ್ಷಿಪ್ರವಾಗಿ ವಿಕಾಸಗೊಂಡು ಎಲ್ಲ ಬಗೆಯ ಜ್ಞಾನ ಶಾಖೆಗಳ ಮಾಧ್ಯಮವಾಗಲು ಸಮರ್ಥವಾಯಿತು ಎನ್ನಬಹುದು.

## 2.7 ಕನ್ನಡ ಭಾಷೆಯ ಪ್ರಾಂತಭೇದಗಳು

ವಿಶಾಲವಾದ ಪ್ರದೇಶದಲ್ಲಿ ಒಂದು ಭಾಷೆಯನ್ನಾಡುವ ಜನರು ಇರುವಾಗ, ಪರಸ್ಪರ ಸಂಪರ್ಕವು ಸುಲಭವಲ್ಲದಿದ್ದಾಗ ಸಹಜವಾಗಿ ಬೇರೆ ಬೇರೆ ಸ್ಥಳಗಳಲ್ಲಿ ಮಾತನಾಡುವ ಭಾಷೆಯಲ್ಲಿ ವ್ಯತ್ಯಾಸಗಳು ಕಂಡುಬರುತ್ತವೆ. ದೇಶದ ವೈಶಾಲ್ಯದ ಜೊತೆಗೆ ಭೌಗೋಳಿಕ ಅಡಚಣೆಗಳು ಅಥವಾ ನೈಸರ್ಗೀಕ ಅಡಚಣೆಗಳು ಮತ್ತು ಒಂದೊಂದು ಭಾಗವು ಬೇರೆ ಬೇರೆಯವರ ಆಡಳಿತಕ್ಕೆ ಸೇರಿರುವುದು ಮುಂತಾದುವೂ ಸೇರುತ್ತವೆ. ಇದರ ಜೊತೆಗೆ ಅನ್ಯಭಾಷೆಗಳನ್ನು ಮಾತನಾಡುವವರ ಸಂಪರ್ಕವೂ ಒಂದು ಮುಖ್ಯವಾದ ಅಂಶವಾಗಿದೆ.

ಕರ್ನಾಟಕವು ಹಿಂದೆ ಈಗ ಇರುವುದಕ್ಕಿಂತಲೂ ಹೆಚ್ಚು ವಿಸ್ತಾರವಾಗಿತ್ತು. ಆಗ ಸಂಪರ್ಕ ಮಾಧ್ಯಮಗಳು, ಸಾರಿಗೆ ಸೌಲಭ್ಯಗಳು ಈಗ ಇರುವಂತೆ ಇರಲಿಲ್ಲ. ಇದರ ಜೊತೆಗೆ ಪರ್ವತ ಸಾಲುಗಳು, ದೊಡ್ಡ ನದಿಗಳು ಮುಂತಾದುವೂ ಜನರ ಸಂಪರ್ಕವನ್ನು ಸೀಮಿತಗೊಳಿಸಿದ್ದುವು. ಇವುಗಳು ನೈಸರ್ಗೀಕವಾದ ಅಡಚಣೆಗಳು. ಅಂದರೆ ಮನುಷ್ಯರಿಂದ ಸೃಷ್ಟಿಯಾದವುಗಳಲ್ಲ. ಅವುಗಳನ್ನು ಗೆಲ್ಲುವುದು ಆ ಕಾಲದಲ್ಲಿ ಸಾಧ್ಯವಿರಲಿಲ್ಲ. ಎರಡನೆಯದಾಗಿ ವಿಜಯನಗರ ಸಾಮ್ರಾಜ್ಯದ ಪತನದ ನಂತರ ಕನ್ನಡ ನಾಡು ಒಂದಾಗಿ ಉಳಿಯಲಿಲ್ಲ. ಬ್ರಿಟಿಷರು ಬಂದ ಮೇಲೆ ಕೂಡ ನಾಡು ಒಂದಾಗಲಿಲ್ಲ. ಅದು ಅವರಿಗೆ ಬೇಕಾಗಿಯೂ ಇರಲಿಲ್ಲ. ಕನ್ನಡ ನಾಡಿನ ಕೆಲವು ಭಾಗಗಳು ಬೊಂಬಾಯಿ ಆದಿಪತ್ಯಕ್ಕೂ, ಕೆಲವು ಭಾಗಗಳು ನಿಜಾಮನ ಅಧಿಪತ್ಯಕ್ಕೂ, ಕೆಲವು ಮದ್ರಾಸು (ಚೆನ್ನೈ) ಅಧಿಪತ್ಯಕ್ಕೂ ಸೇರಿದ್ದುವು. ಉಳಿದ ಹಳೆಯ ಮೈಸೂರು ಸಂಸ್ಥಾನವು ಮಾತ್ರ ಕನ್ನಡಿಗರದಾಗಿ ಉಳಿದುಕೊಂಡಿತ್ತು. ಆಡಳಿತವು ಬೇರೆ ಬೇರೆಯಾಗಿದ್ದು, ಆಡಳಿತ ಭಾಷೆಯೂ ಆಯಾ ಅಧಿಪತ್ಯಗಳ ಭಾಷೆಯಾಗಿ ಇದ್ದುದರಿಂದ ಕನ್ನಡ ಭಾಷೆಯು ಮನೆಯ ಒಳಗಿನ ಭಾಷೆಯಾಗಿ ಉಳಿಯಿತು ಮತ್ತು ಅದರ ಸ್ವರೂಪವು ಬದಲಾಗತೊಡಗಿತು. ಹೀಗಾದುದರಿಂದ ಬೊಂಬಾಯಿ ಕರ್ನಾಟಕ, ಹೈದರಬಾದ್ ಕರ್ನಾಟಕ, ಮದ್ರಾಸ್ ಕರ್ನಾಟಕ ಎಂಬ ಹೆಸರು

ಪ್ರಾಪ್ತವಾಯಿತು. ಈ ಮೂರು ಪ್ರದೇಶಗಳ ಕನ್ನಡವು ಮೂರು ವಿಧವಾಗಿ ಮಾರ್ಪಟ್ಟಿತು. ಬೊಂಬಾಯಿ ಕರ್ನಾಟಕ ಭಾಗದಲ್ಲಿ ಮರಾಠಿಯ ಪ್ರಭಾವಕ್ಕೆ ಕನ್ನಡ ಒಳಗಾಯಿತು. ಹೈದರಾಬಾದ್ ಕರ್ನಾಟಕ ಭಾಗದಲ್ಲಿ ಅದು ಉರ್ದು ಪ್ರಭಾವಕ್ಕೆ ಗುರಿಯಾಯಿತು, ಮದ್ರಾಸ್ ಕರ್ನಾಟಕ ಭಾಗದಲ್ಲಿ ತಮಿಳಿನ ಪ್ರಭಾವ ಉಂಟಾಯಿತು. ಹೀಗಾಗಿ ಕನ್ನಡದಲ್ಲಿ ಪ್ರಾಂತಭೇದಗಳು ಉಂಟಾದುವು. ಈ ಭೇದಗಳು ಆಡುಮಾತಿನಲ್ಲಿ ಕಾಣುವಷ್ಟು ಬರಹದ ಭಾಷೆಯಲ್ಲಿ ಕಾಣಿಸುವುದಿಲ್ಲ. ಉದ್ದೇಶಪೂರ್ವಕವಾಗಿ ಪ್ರಾದೇಶಿಕತೆಯನ್ನು ಪ್ರಕಟಿಸಲು ಆಡುಮಾತನ್ನು ಬಳಸಿದಾಗ ಬರಹದಲ್ಲಿಯೂ ಭೇದ ಕಾಣಿಸುತ್ತದೆ. ಕರ್ನಾಟಕ ಏಕೀಕರಣವಾದ ನಂತರ ಒಂದು ಆಡಳಿತದ ಅಡಿಯಲ್ಲಿ ಬೊಂಬಾಯಿ ಕರ್ನಾಟಕ ಭಾಗ, ಹೈದರಬಾದ್ ಕರ್ನಾಟಕ ಭಾಗ ಮತ್ತು ಮದ್ರಾಸ್ ಕರ್ನಾಟಕ ಭಾಗ ಹಾಗೂ ಹಳೆಯ ಮೈಸೂರು ಸಂಸ್ಥಾನ ಇವೆಲ್ಲವೂ ಒಂದಾದುವು. ಸಾರಿಗೆ ವ್ಯವಸ್ಥೆ, ಸಂಪರ್ಕಮಾಧ್ಯಮ ಮುಂತಾದುವು ದೂರವನ್ನು, ಮನಸ್ಸುಗಳನ್ನು ಹತ್ತಿರಕ್ಕೆ ತಂದುವು. ಬರಹದ ಭಾಷೆ ಏಕರೂಪವನ್ನು ತಾಳಿತು. ಆಡಳಿತ ಕನ್ನಡ ಜಾರಿಗೆ ಬಂದಿತು. ಇಷ್ಟಾದರೂ ಹಿಂದೆ ಇದ್ದ ಭಾಗಗಳ ಜನರು ಸಂಸ್ಕಾರವಶರಾಗಿ ಮಾತಿನಲ್ಲಿ ಭಿನ್ನತೆಯನ್ನು ಪ್ರಕಟಿಸುತ್ತಾರೆ ಬೆಳಗಾವಿಯವರು, ರಾಯಚೂರಿನವರು ಮಂಗಳೂರು ಕಾರವಾರದವರು ಮೈಸೂರಿನವರು ಜೊತೆ ಸೇರಿದಾಗ ಅವರವರ ಪ್ರಾಂತಭೇದಗಳು ಹೆಚ್ಚು ಕಡಿಮೆ ಪ್ರಮಾಣದಲ್ಲಿ ಗೋಚರಿಸುತ್ತವೆ. ಕೆಲವರು ಹಾಸ್ಯಕ್ಕೆ ಪಂಚರಂಗಿ ಕನ್ನಡ ಎನ್ನುತ್ತಾರೆ. ಆಡುಮಾತಿನಲ್ಲಿ ಕಾಣುವ ವ್ಯತ್ಯಾಸದಿಂದ ಸ್ವಾರಸ್ಯ ಹೆಚ್ಚುತ್ತದೆಯೇ ವಿನಾ ಅಪಾಯಕರವಾದ ಅಂಶವೇನೂ ಅಲ್ಲಿರುವುದಿಲ್ಲ. ಆದರೆ ಕ್ರಮೇಣ ಪ್ರಾಂತಭೇದಗಳು ಕಡಿಮೆಯಾಗುತ್ತ ಬರಬಹುದು. ಏಕರೂಪದ ಭಾಷೆ ಅಸ್ತಿತ್ವಕ್ಕೆ ಬರಬಹುದು.

## 2.8 ಸ್ವಪರೀಕ್ಷೆ ಪ್ರಶ್ನೆಗಳು

೧. ಕನ್ನಡ ನಾಡಿನಲ್ಲಿ ನೆಲೆ ನಿಂತ ಪ್ರಥಮ ರಾಜವಂಶ ಯಾವುದು?

..........................................................................................

..........................................................................................

೨. ಸಂಸ್ಕೃತದಿಂದ ಕನ್ನಡ ಹುಟ್ಟಿದೆ ಎಂಬುದು ನಿಜವೆ?

..........................................................................................

..........................................................................................

೩. ಅಚ್ಚಕನ್ನಡ ಛಂದೋರೂಪಗಳು ಯಾವುವು?

..........................................................................................

೪. ಭಾಷೆಯಲ್ಲಿ ಸ್ವೀಕರಣ ಎಂದರೇನು?

.................................................................................................

.................................................................................................

೫. ದ್ರಾವಿಡ ಭಾಷೆಗಳಲ್ಲಿ ಲಿಂಗಗಳು ಮತ್ತು ವಚನಗಳು ಎಷ್ಟು?

.................................................................................................

.................................................................................................

೬. ಕನ್ನಡ ಭಾಷೆಯ ವಿವಿಧ ಹಂತಗಳು ಯಾವುವು?

.................................................................................................

.................................................................................................

೭. ಪ್ರಾಂತಭೇದಗಳು ಎಂದರೇನು? ಅದಕ್ಕೆ ಕಾರಣಗಳಾವುವು?

.................................................................................................

.................................................................................................

೮. ಧ್ವನಿಮಾ ಎಂದರೇನು?

.................................................................................................

.................................................................................................

೯. ಕನ್ನಡದಲ್ಲಿ ಮಹಾಪ್ರಾಣಗಳು ಸಹಜವಾಗಿ ಇವೆಯೆ?

.................................................................................................

.................................................................................................

೧೦. ಕರ್ಮಣಿ ಪ್ರಯೋಗವು ಕನ್ನಡದ ಲಕ್ಷಣವೆ?

.............................................................................................................

.............................................................................................................

## 2.9 ಸಾರಾಂಶ

ಭಾಷೆ ಎನ್ನುವುದು ಪ್ರಾಣಿ ಜಗತ್ತಿನಲ್ಲಿ ಮನುಷ್ಯರಿಗೆ ಮಾತ್ರ ಇರುವುದೆಂದು ಹೇಳಲು ಸಾಧ್ಯವಿಲ್ಲವಾದರೂ ಹೀಗೆ ಉಚ್ಚರಿತ ಧ್ವನಿಸಂಕೇತಗಳಿಂದ ಧ್ವನಿಮಾಗಳನ್ನು ರೂಪಿಸಿಕೊಂಡು ಶಬ್ದಗಳನ್ನು ಬಳಸಿ ಮಾತನಾಡುವುದು ಮನುಷ್ಯರಿಗೆ ಸೀಮಿತವಾದುದೆಂದು ಹೇಳಬಹುದು. ಜಗತ್ತಿನಲ್ಲಿ ಅಸಂಖ್ಯ ಭಾಷೆಗಳಿವೆ. ಅವುಗಳಲ್ಲಿ ಲಿಪಿಯುಳ್ಳ ಭಾಷೆಗಳು, ಸಾಹಿತ್ಯಿಕ ಭಾಷೆಗಳು, ಅನಾಗರಿಕ ಭಾಷೆಗಳು, ಲಿಪಿ ರಹಿತ ಭಾಷೆಗಳು ಎಂಬ ಮುಖ್ಯವಾದ ವಿಭಾಗಗಳಿವೆ. ಮುಂದುವರಿದ ಭಾಷೆಗಳು, ಹಿಂದುಳಿದ ಭಾಷೆಗಳು ಎಂಬ ವಿಭಾಗವನ್ನು ಮಾಡಬಹುದು. ವಿಜ್ಞಾನ, ಸಾಹಿತ್ಯ, ಕಲೆ, ಶಾಸ್ತ್ರ ಮುಂತಾದ ವಿಷಯಗಳ ಬಗ್ಗೆ ಸಮೃದ್ಧವಾದ ಮಾಹಿತಿಯನ್ನು ಕೊಡುವ ಗ್ರಂಥಗಳಿರುವ ಭಾಷೆ ಮುಂದುವರಿದ ಭಾಷೆಯಾಗಿರುತ್ತದೆ ಇತರರು ಆ ಭಾಷೆಯನ್ನು ಕುರಿತ, ಓದಿ, ವ್ಯವಹರಿಸಲು ಇಚ್ಚಿಸುತ್ತಾರೆ. ಬೆಟ್ಟಗುಡ್ಡ ಪ್ರದೇಶಗಳಲ್ಲಿ ವಾಸಿಸುವ ಆದಿವಾಸಿ ಜನರು ಆಡುವ ಭಾಷೆಗಳು ತುಂಬಾ ಹಿಂದುಳಿದ ಭಾಷೆಗಳಾಗಿರುತ್ತವೆ ಎಂದು ಹೇಳಬೇಕಾಗಿಲ್ಲ. ಲಿಪಿಯಿಲ್ಲದ ಭಾಷೆಗಳಲ್ಲಿಯೂ ಸಮೃದ್ಧವಾದ ಸಾಹಿತ್ಯವಿರುತ್ತದೆ. ಅವರು ಬೇರೆ ಭಾಷೆಯ ಲಿಪಿಯನ್ನು ಸ್ವೀಕರಿಸಿಕೊಂಡು ಸಾಹಿತ್ಯ ರಚಿಸಿರುತ್ತಾರೆ. ಉದಾಹರಣೆಗೆ ತುಳು, ಕೊಡವ ಸಾಹಿತ್ಯವು ಕನ್ನಡ ಲಿಪಿಯಲ್ಲಿದೆ. ಕೊಂಕಣಿ ಸಾಹಿತ್ಯವು ಕನ್ನಡದಲ್ಲಿಯೂ, ಮರಾಠಿಯಲ್ಲಿಯೂ ಇದೆ ಹಿಂದೆ ಇದ್ದ ಎಷ್ಟೋ ಭಾಷೆಗಳು ಈಗ ಇಲ್ಲ. ಅವನ್ನು ಆಡುತ್ತಿದ್ದ ಜನರು ನಷ್ಟವಾದ ಮೇಲೆ ಭಾಷೆಗಳೂ, ನಷ್ಟವಾದುವು. ಜಗತ್ತಿನ ಭಾಷೆಗಳಿಗೆ ತಮ್ಮದೇ ಆದ ಇತಿಹಾಸವಿರುತ್ತದೆ. ಅವುಗಳನ್ನು ಅವುಗಳ ಸ್ವರೂಪ ಲಕ್ಷಣಗಳಿಗೆ ಅನುಗುಣವಾಗಿ ಬೇರೆ ಬೇರೆ ಪರಿವಾರಗಳನ್ನಾಗಿ ವಿಂಗಡಿಸಿದ್ದಾರೆ. ಒಂದೊಂದು ಪರಿವಾರದಲ್ಲಿಯೂ ಅನೇಕ ಭಾಷೆಗಳಿರುತ್ತವೆ. ಇಂತಹ ಒಂದು ಪರಿವಾರ ದ್ರಾವಿಡ ಭಾಷಾ ಪರಿವಾರ. ಇದರಲ್ಲಿ ಬೇರೆ ಬೇರೆ ಭಾಷಾವರ್ಗಗಳೂ ಇವೆ. ಉಪಭಾಷಾ ವರ್ಗಗಳೂ ಇವೆ. ದ್ರಾವಿಡ ಭಾಷಾವರ್ಗದಲ್ಲಿ ದಕ್ಷಿಣ ದ್ರಾವಿಡ ಭಾಷಾಗಳ ಗುಂಪಿಗೆ ಕನ್ನಡವು ಸೇರುತ್ತದೆ. ಇದರಲ್ಲಿಯೂ ಇರುವ ಬೇರೆ ಬೇರೆ ವರ್ಗಗಳ ಪೈಕಿ ಕನ್ನಡ ಭಾಷಾವರ್ಗ ಒಂದು ಸ್ವತಂತ್ರ ವಿಭಾಗವಾಗಿದೆ ಕನ್ನಡವು ತಮಿಳನ್ನು ಬಿಟ್ಟು, ಎರಡನೇ ಪ್ರಾಚೀನ ಭಾಷೆಯಾಗಿದೆ. ಈ ವರ್ಗದಲ್ಲಿ ಬಡಗ, ಕೊಡಗು, ಸೋಲಿಗ ಕನ್ನಡ ಮಾತ್ರವಲ್ಲದೆ ಅರವ, ಯರವ, ಹಸಳ, ಇರುಳ, ಕೊರಗ ಮುಂತಾದ ರೂಪಗಳೂ ಇವೆ. ಕನ್ನಡವು ದ್ರಾವಿಡ ಭಾಷೆ, ಆದುದರಿಂದ ಆರ್ಯ ಭಾಷೆಯಾದ ಸಂಸ್ಕೃತದೊಡನೆ ಇರುವ ಸಂಬಂಧ ಹೊರಗಿನ ಸಂಬಂಧವೇ ವಿನಾ ರಕ್ತ ಸಂಬಂಧವಲ್ಲ ಎಂದು ಹೇಳಲಾಗಿದೆ. ಬರಹ,ಭಾಷಣ ಇತ್ಯಾದಿ ಚಟುವಟಿಕೆಗಳನ್ನು ಹೊರತು ಪಡಿಸಿ ನಾವು ವ್ಯವಹರಿಸುವ ಭಾಷಾ ಸ್ವರೂಪವನ್ನು ಎಚ್ಚರದಿಂದ ಗಮನಿಸಿದರೆ ಅದರಲ್ಲಿ ಸಂಸ್ಕೃತ ಶಬ್ದಗಳಿರುವುದಿಲ್ಲ. ಯಾರಾದರೂ ಡಾಕ್ಟರ್ ಬಳಿ ಹೋದಾಗ ತಲೆನೋವು ಎಂದೋ ಹೊಟ್ಟೆನೋವು ಎಂದೋ ಹೇಳುತ್ತಾರೆ. ಅದಕ್ಕೆ ಬದಲು ಶಿರೋವೇದನೆ, ಜಠರ

ಶೂಲೆ ಇತ್ಯಾದಿ ಹೇಳುವುದಿಲ್ಲ ಅಲ್ಲವೆ. ಭಾಷಾ ವಿಜ್ಞಾನಿಗಳ ಸಂಶೋಧನೆಯಿಂದ ತಿಳಿದು ಬಂದ ಸತ್ಯವಾದ ವಿಷಯವನ್ನು ಈಗ ಎಲ್ಲರೂ ಒಪ್ಪಿದ್ದಾರೆ. ಕನ್ನಡವು ಕ್ರಿ.ಶ.ದ ಪ್ರಾರಂಭದಿಂದಲೇ ವಿಕಾಸಗೊಳ್ಳುತ್ತ ಬಂದಿದೆ ಎಂಬುದನ್ನು ಒಪ್ಪಲಾಗಿದೆ. ಎಂಟು, ಹತ್ತನೇ ಶತಮಾನದ ವೇಳೆಗೆ ರಚಿತವಾದ ಲಕ್ಷಣ ಗ್ರಂಥ, ಗದ್ಯಕೃತಿ, ಕಾವ್ಯ ಮುಂತಾದವು ಸಿಗುತ್ತಿರುವಾಗ ಭಾಷೆ ಇನ್ನು ಕೆಲವು ಶತಮಾನಗಳ ಹಿಂದೆಯೇ ಚೆನ್ನಾಗಿ ಬೆಳವಣಿಗೆ ಹೊಂದಿತ್ತು ಎಂದು ನಂಬಬಹುದು. ಆದರೆ ಭಾಷೆಯು ಬೆಳೆಯುತ್ತ ಹಲವು ಹಂತಗಳನ್ನು ಹಾಯ್ದು ಈಗ ಆಧುನಿಕ ಕನ್ನಡದ ಸ್ವರೂಪವನ್ನು ಪಡೆದುಕೊಂಡಿದೆ. ಕಂಪ್ಯೂಟರ್ ಭಾಷೆಯಾಗಿಯೂ ಬಳಸಲ್ಪಡುತ್ತದೆ. ಯಾವುದೇ ವಿಷಯವನ್ನು ಕನ್ನಡದಲ್ಲಿ ವಿವರಿಸಬಹುದಾಗಿದೆ. ಆದರೆ ಜನರಿಗೆ ಭಾಷಾಭಿಮಾನ ಇರಬೇಕು, ತಿಳಿದವರು ಕನ್ನಡದಲ್ಲಿ ತಿಳಿಸುವ ಮನಸ್ಸು ಮಾಡಬೇಕು. ಸಂಕಲ್ಪ ಶಕ್ತಿಯ ಕೊರತೆಯಿಂದ ಕನ್ನಡವು ಹಿಂದೆ ಬೀಳಬಾರದು, ಇನ್ನೂ ಮುಂದುವರಿಯಬೇಕು.

## 2.10 ಸ್ವಪರೀಕ್ಷೆ ಪ್ರಶ್ನೆಗಳಿಗೆ ಉತ್ತರಗಳು

೧. ಕನ್ನಡ ನಾಡಿನ ಪ್ರಥಮ ರಾಜವಂಶವೆಂದರೆ ಕದಂಬ ವಂಶ.

೨. ಸಂಸ್ಕೃತವು ಇಂಡೋ ಆರ್ಯನ್ ಭಾಷೆ, ಕನ್ನಡವು ದ್ರಾವಿಡ ಭಾಷೆ ಇವುಗಳಿಗೆ ಸಂಬಂಧವು ಸಹಜವಾಗಿ ಇಲ್ಲ.

೩. ತ್ರಿಪದಿ, ಅಕ್ಕರಗಳು, ಷಟ್ಪದಿ, ಸಾಂಗತ್ಯ ಮುಂತಾದವು.

೪. ಒಂದು ಭಾಷೆಯು ತನಗಿಂತ ಮುಂದುವರಿದ ಭಾಷೆಗಳಿಂದ ಕೆಲವು ಶಬ್ದಗಳನ್ನು ಸ್ವೀಕರಿಸಿ ತನ್ನದಾಗಿಸಿಕೊಳ್ಳುತ್ತದೆ.

೫. ದ್ರಾವಿಡ ಭಾಷೆಗಳಲ್ಲಿ ಲಿಂಗಗಳು ಎರಡು ವಚನಗಳೂ ಎರಡು (ಆದರೆ ಅನುಕೂಲಕ್ಕೆ ಮೂರು ಲಿಂಗಗಳನ್ನು ಬಳಸುತ್ತಾರೆ).

೬. ಪೂರ್ವದ ಹಳಗನ್ನಡ, ಹಳಗನ್ನಡ, ನಡುಗನ್ನಡ, ಹೊಸಗನ್ನಡ.

೭. ವಿಶಾಲವಾದ ಒಂದು ರಾಜ್ಯದಲ್ಲಿ ಒಂದೊಂದು ಕಡೆ ಒಂದೊಂದು ಬಗೆಯ ಸ್ವರೂಪದ ಭಾಷಾ ಪ್ರಭೇದವನ್ನು ಆಡುವುದು ಕಂಡು ಬರುತ್ತದೆ. ಇದಕ್ಕೆ ಹಿಂದಿನ ಕಾಲದಲ್ಲಿ ನದಿಗಳು, ಅರಣ್ಯಗಳು, ಮುಂತಾದ ಸಾರಿಗೆ ಅಡಚಣೆಗಳು, ಗಡಿಗಳ ಇತರ ಭಾಷೆಗಳು, ಆಡಳಿತಾತ್ಮಕ ಕಾರಣಗಳು ಇದ್ದುವು.

೮. ಧ್ವನಿಮಾ ಎಂದರೆ ಒಂದು ವರ್ಣಸಂಕೇತ ಎನ್ನಬಹುದು.

೯. ಕನ್ನಡದಲ್ಲಿ ಮಹಾಪ್ರಾಣಗಳು ಸಹಜವಾಗಿ ಇಲ್ಲ.

೧೦. ಕರ್ಮಣಿ ಪ್ರಯೋಗವು ಕನ್ನಡಕ್ಕೆ ಸಹಜವಾದುದಲ್ಲ.

## 2.10 ಹೆಚ್ಚಿನ ಓದಿಗೆ

೧. ಕನ್ನಡ ಕೈಪಿಡಿ - ೧ - ಮೈಸೂರು ವಿಶ್ವವಿದ್ಯಾನಿಲಯ

೨. ಕರ್ನಾಟಕ ವಿಷಯ ವಿಶ್ವಕೋಶ - ಕನ್ನಡ ಅಧ್ಯಯನ ಸಂಸ್ಥೆ

೩. ಕನ್ನಡ ಭಾಷಾ ಚರಿತ್ರೆ - ರಾ.ಯ. ಧಾರವಾಡಕರ

೪. ಕರ್ನಾಟಕ ಸಾಮ್ರಾಜ್ಯ- ರಾ.ಹ. ದೇಶಪಾಂಡೆ

## ಸಂಚಿಕೆ - 9
## ಕನ್ನಡ ಭಾಷೆಯ ಚರಿತ್ರೆ

---

## ಘಟಕ - 3
## ಕನ್ನಡ ಭಾಷೆಯ ವಿವಿಧ ಅಂಗಗಳು : ನಾಮಪದ, ಲಿಂಗ ವಚನ, ವಿಭಕ್ತಿ, ಸರ್ವನಾಮ, ಕ್ರಿಯಾಪದ, ಅವ್ಯಯ ಇತ್ಯಾದಿ

---

ಪರಿವಿಡಿ

## 3.0. ಘಟಕದ ಉದ್ದೇಶಗಳು

- ಈ ಘಟಕದ ಅಧ್ಯಯನದಿಂದ

  ಈ ಕೆಳಕಂಡ ವ್ಯಾಕರಣ ವಿಚಾರಗಳನ್ನು ಅರಿತುಕೊಳ್ಳುವಿರಿ.

  ವರ್ಣಮಾಲೆ, ನಾಮಪದ, ಲಿಂಗ, ವಚನ, ವಿಭಕ್ತಿ,

  ಸರ್ವನಾಮ, ಕ್ರಿಯಾಪದ, ಗುಣವಾಚಕ, ಸಂಖ್ಯಾವಾಚಕ, ಅವ್ಯಯ.

## 3.1. ಪೀಠಿಕೆ

ಸಂಚಿಕೆ 9 ರ ಘಟಕ - 1 ಮತ್ತು 2 ರಲ್ಲಿ ಕನ್ನಡ ಭಾಷೆಗೆ ಸಂಬಂಧಿಸಿದ ಕೆಲವು ವಿಚಾರಗಳನ್ನು ತಿಳಿದಿದ್ದೀರಿ. ಇದರಲ್ಲಿ ಮುಖ್ಯವಾಗಿ ಭಾಷೆ ಎಂದರೇನು? ಅದರ ಸ್ವರೂಪ ಹೇಗಿರುತ್ತದೆ? ಅದರ ಪ್ರಮುಖ ಲಕ್ಷಣಗಳಾವುವು ಎಂಬುದನ್ನು ತಿಳಿದಿದ್ದೀರಿ. ಹಾಗೆಯೇ ಪ್ರಪಂಚದಲ್ಲಿ ಸಾವಿರಾರು ಭಾಷೆಗಳಿರುವುದಾಗಿಯೂ ಅವುಗಳಲ್ಲಿ ಕೆಲವು ಸಮಾನ ಲಕ್ಷಣಗಳನ್ನು ಹೊಂದಿರುವುದಾಗಿಯೂ ಮತ್ತೆ ಕೆಲವು ಒಂದಕ್ಕೊಂದು ಸಂಬಂಧವಿಲ್ಲದ ಸ್ವರೂಪವನ್ನು ಹೊಂದಿರುವುದಾಗಿಯೂ ಇರುವುದನ್ನು ಗಮನಿಸಿದ್ದೀರಿ. ಪರಸ್ಪರ ಸಮಾನ ಲಕ್ಷಣಗಳುಳ್ಳ ಭಾಷೆಗಳನ್ನು ಒಂದು 'ಭಾಷಾ ವರ್ಗ' ವಾಗಿ ಗುರುತಿಸುತ್ತಾರೆ. ಇಂಥ ಭಾಷಾವರ್ಗಗಳು ಹಲವಾರು ಇವೆ. ಪ್ರಸ್ತುತ ನಾವು ಅಭ್ಯಾಸ ಮಾಡುತ್ತಿರುವ ಕನ್ನಡ ಭಾಷೆಯು 'ದ್ರಾವಿಡ ಭಾಷಾ ವರ್ಗ' ಎಂಬ ಭಾಷಾ ವರ್ಗಕ್ಕೆ ಸೇರಿದ ಭಾಷೆಯಾಗಿದೆ ಎಂಬುದನ್ನು ನೀವು ಮುಖ್ಯವಾಗಿ ಗಮನದಲ್ಲಿಡಬೇಕು. ಕನ್ನಡವಲ್ಲದೆ ತಮಿಳು, ತೆಲುಗು, ಮಲಯಾಳ, ತುಳು ಮೊದಲಾದ ಇಪ್ಪತ್ತೈದಕ್ಕೂ ಹೆಚ್ಚು ಭಾಷೆಗಳು ಈ ದ್ರಾವಿಡ ಭಾಷಾ ವರ್ಗದಲ್ಲಿ ಸೇರುತ್ತವೆ.

ಭಾರತೀಯ ಭಾಷೆಗಳಿಗೆ ಸಂಸ್ಕೃತವು ತಾಯಿ ಭಾಷೆ ಎಂಬ ಅಭಿಪ್ರಾಯವಿತ್ತು. ಕನ್ನಡಕ್ಕೂ ಇದನ್ನು ಅನ್ವಯಿಸಲಾಗುತ್ತಿತ್ತು. ಆದರೆ ಇತ್ತೀಚೆಗೆ ನಡೆದ ಅಧ್ಯಯನಗಳಿಂದ ಸಂಸ್ಕೃತವು 'ಕನ್ನಡದ ಹೆತ್ತ ತಾಯಿ ಅಲ್ಲ ಸಾಕು ತಾಯಿ' ಎಂಬ ಅಭಿಪ್ರಾಯ ಸ್ಪಷ್ಟವಾಗಿದೆ. ಸಂಸ್ಕೃತದ ಅನೇಕ ಪದಗಳನ್ನು ಕೆಲವು ವ್ಯಾಕರಣ ವಿಶೇಷಗಳನ್ನು ಕನ್ನಡವು ಪಡೆದಿದೆ. ಅಂದರೆ ಕನ್ನಡದ ಮೇಲೆ ಸಂಸ್ಕೃತದ ಪ್ರಭಾವ ಹೆಚ್ಚಿನ ಪ್ರಮಾಣದಲ್ಲಿ ಆಗಿದೆ ಅಷ್ಟೆ. ಕನ್ನಡ ಸಂಸ್ಕೃತ ಸಂಬಂಧ ಕುರಿತ ಈ ವಿಚಾರವಲ್ಲದೆ ಕನ್ನಡ ಶಬ್ದದ ನಿಷ್ಪತ್ತಿ, ಕನ್ನಡ ನಾಡು ನುಡಿಗಳ ಪ್ರಾಚೀನತೆ, ಕನ್ನಡ ಭಾಷೆಯು ಕಾಲಕಾಲಕ್ಕೆ ತಾಳಿದ ಸ್ವರೂಪವನ್ನು ಆಧರಿಸಿ ಮಾಡಿದ ಕನ್ನಡ ಭಾಷೆಯ ವಿವಿಧ ಹಂತಗಳು ಮತ್ತು ಕನ್ನಡ ನಾಡು ವಿಶಾಲವಾಗಿರುವ ಪ್ರಯುಕ್ತ ಪ್ರಾದೇಶಿಕ ಭಿನ್ನತೆಗಳು ಕನ್ನಡ ಭಾಷೆಯಲ್ಲಿ ಕಾಣಿಸಿಕೊಂಡಿರುವ ಸ್ವರೂಪ ಮೊದಲಾದುವನ್ನೆಲ್ಲ ನೀವು ಅಭ್ಯಾಸ ಮಾಡಿದ್ದೀರಿ. ಈ ಎರಡೂ ಘಟಕಗಳು ಕನ್ನಡ ಭಾಷೆಯ ಬಗೆಗಿನ ಅದರ ಚಾರಿತ್ರಿಕ ಸಂಗತಿಗಳನ್ನು ಕುರಿತ ಕೆಲವು ವಿಚಾರಗಳನ್ನು ಕುರಿತಿವೆ. ಮುಂದಿನ ಎರಡು ಘಟಕಗಳಲ್ಲಿ (ಈ ಘಟಕವನ್ನೂ ಒಳಗೊಂಡಂತೆ) ಕನ್ನಡ ಭಾಷೆಯ ವ್ಯಾಕರಣ ವಿಚಾರವನ್ನು ಕುರಿತ ಕೆಲವು ಸಂಗತಿಗಳನ್ನು ತಿಳಿಯಲಿದ್ದೀರಿ. ಕನ್ನಡ ಭಾಷೆಯ ವ್ಯಾಕರಣ ವಿವಿಧ ಅಂಗಗಳಾದ ವರ್ಣಮಾಲೆ ವಿಚಾರ, ನಾಮಪದ, ಲಿಂಗ, ವಚನ, ವಿಭಕ್ತಿ, ಸರ್ವನಾಮ, ಕ್ರಿಯಾಪದ, ಕರ್ಮಣಿ ಪ್ರಯೋಗ,

ಗುಣವಾಚಕ, ಸಂಖ್ಯಾವಾಚಕ, ಅವ್ಯಯ: ಮತ್ತು ಭಾಷೆಗೆ ಸಂಬಂಧಿಸಿದ ಇತರ ವಿಚಾರಗಳಾದ ಶಬ್ದಕೋಶದ ಬೆಳವಣಿಗೆ, ಕನ್ನಡ ಭಾಷೆಯಲ್ಲಿ ಕಂಡುಬರುವ ಅನ್ಯದೇಶ್ಯ ಪದಗಳು ಮೊದಲಾದ ಸಂಗತಿಗಳನ್ನು ತಿಳಿಯುತ್ತೀರಿ. ಈ ಘಟಕದಲ್ಲಿ ಅಭ್ಯಾಸ ಮಾಡಬೇಕಿರುವ ಸಂಗತಿಗಳನ್ನು ಇನ್ನುಮುಂದೆ ವಿವರವಾಗಿ ಒಂದೊಂದನ್ನು ನೋಡೋಣ.

## 3.2. ವರ್ಣಮಾಲೆ

ಒಂದು ಭಾಷೆಯಲ್ಲಿ ಬಳಕೆಯಾಗುವ ಅಕ್ಷರಗಳನ್ನು ವರ್ಣಮಾಲೆ ಎಂದು ಕರೆಯುತ್ತಾರೆ. ವರ್ಣ ಎಂದರೆ ಅಕ್ಷರ ಎಂದರ್ಥ. ಕೇಶಿರಾಜ ಈ ವರ್ಣಮಾಲೆಯನ್ನು ಶುದ್ಧಗೆ ಎಂದು ಕರೆದಿದ್ದಾನೆ. ಅವನ ಪ್ರಕಾರ ಕನ್ನಡದಲ್ಲಿ ನಲವತ್ತೇಳು ಅಕ್ಷರಗಳಿವೆ. ಇದರಲ್ಲಿ ಎ, ಒ, ಱ, ೞ, ಳ (ಕುಳ) ಎಂಬ ಐದು ಅಕ್ಷರಗಳನ್ನು ಸೇರಿಸಿದ್ದಾನೆ. ಪ್ರಸ್ತುತ ಕನ್ನಡ ವರ್ಣಮಾಲೆಯಲ್ಲಿ ೫೦ ಅಕ್ಷರಗಳನ್ನು ನಿರ್ಣಯಿಸಲಾಗುತ್ತದೆ.

ಸ್ವರಗಳು ೧೪

| | |
|---|---|
| ಹ್ರಸ್ವ ಸ್ವರ | ಅ, ಇ, ಉ, ಋ, ಎ, ಒ |
| ಧೀರ್ಘ ಸ್ವರ | ಆ, ಈ, ಊ, ೠ, ಏ, ಓ |
| ಸಂಧ್ಯಕ್ಷರಗಳು | ಐ, ಔ. |

ವ್ಯಂಜನಗಳು (ವರ್ಗೀಯ) ೨೫

ಕ್ ಖ್ ಗ್ ಘ್ ಙ್
ಚ್ ಛ್ ಜ್ ಝ್ ಞ್
ಟ್ ಠ್ ಡ್ ಢ್ ಣ್
ತ್ ಥ್ ದ್ ಧ್ ನ್
ಪ್ ಫ್ ಬ್ ಭ್ ಮ್

ವ್ಯಂಜನಗಳು (ಅವರ್ಗೀಯ) ೦೯ — ಯ್ ರ್ ಲ್ ವ್ ಶ್ ಷ್ ಸ್ ಹ್ ಳ್

ಯೋಗವಾಹಗಳು ೦೨ — ಂ, ಃ

ವರ್ಗೀಯ ವ್ಯಂಜನಗಳನ್ನು ಅಲ್ಪಪ್ರಾಣ, ಮಹಾಪ್ರಾಣ, ಅನುನಾಸಿಕಗಳೆಂದು ವರ್ಗೀಕರಿಸಲಾಗುತ್ತದೆ. ವರ್ಗದ ಮೊದಲ ಮತ್ತು ಮೂರನೆಯ ಅಕ್ಷರ ಅಲ್ಪಪ್ರಾಣ. ಎರಡು ಮತ್ತು ನಾಲ್ಕನೆಯ ಅಕ್ಷರ ಮಹಾಪ್ರಾಣ. ಐದನೆಯ ಅಕ್ಷರ ಅನುನಾಸಿಕ.

ಮಹಾಪ್ರಾಣಾಕ್ಷರಗಳು ಸಂಸ್ಕೃತ ಮೂಲದವು. ಆದರೆ ಸಂಸ್ಕೃತ ಪದಗಳು ಹೇರಳವಾಗಿ ಕನ್ನಡ ಭಾಷೆಯಲ್ಲಿ ಇರುವುದರಿಂದ ಮಹಾಪ್ರಾಣಗಳು ಕನ್ನಡಕ್ಕೆ ಅಗತ್ಯವೆನಿಸಿ ಅವುಗಳನ್ನು ಉಳಿಸಿಕೊಳ್ಳಲಾಗಿದೆ. ತಮಿಳು ಮೊದಲಾದ ಇತರ ದ್ರಾವಿಡ ಭಾಷೆಗಳಲ್ಲಿ ಮಹಾಪ್ರಾಣಾಕ್ಷರಗಳು ಇಲ್ಲ. ಕೇಶಿರಾಜನು ' ಒಳವು ಮಹಾಪ್ರಾಣಗಳ್ ವಿಳಸತ್ಕರ್ಣಾಟ ಭಾಷೆಯೊಳ್' ಎನ್ನುತ್ತಾನೆ.

## 3.3. ನಾಮಪದ

ತಮ್ಮ ಅಭಿಪ್ರಾಯಗಳನ್ನು ಮತ್ತೊಬ್ಬರಿಗೆ ತಿಳಿಸುವ ಒಂದು ಬಗೆಯ ಸಾಧನ 'ಭಾಷೆ' ಎಂದು ನೀವು ಈಗಾಗಲೇ ನಿಮ್ಮ ಗಮನದಲ್ಲಿದೆ. ನಮ್ಮ ಅಭಿಪ್ರಾಯಗಳನ್ನು ಇನ್ನೊಬ್ಬರಿಗೆ ತಿಳಿಯುವಂತೆ ಹೇಳುವಾಗ ಅರ್ಥಪೂರ್ಣವಾದ 'ವಾಕ್ಯ' ಗಳನ್ನು ಬಳಸುತ್ತೇವೆ. ವಾಕ್ಯಗಳು 'ಪದ' ಗಳಿಂದ ಕೂಡಿರುತ್ತವೆ ಮತ್ತು ಈ ಪದಗಳು 'ಪ್ರತ್ಯಯ' ಗಳಿಂದ ಕೂಡಿರುತ್ತವೆ.

ವಾಕ್ಯಗಳಲ್ಲಿ ಬಳಕೆಯಾಗುವ ಪದಗಳನ್ನು **'ನಾಮಪದ' 'ಕ್ರಿಯಾಪದ'** ಮತ್ತು **'ಅವ್ಯಯ'** ಎಂದು ಮುಖ್ಯವಾಗಿ ಮೂರು ಭಾಗವಾಗಿ ವಿಂಗಡಿಸುತ್ತಾರೆ.

ಈ ಕೆಲವು ಪದಗಳನ್ನು ಗಮನಿಸಿ : ಅಯ್ಯೋ, ಅಕ್ಕಟಾ, ಏ, ಥಳಥಳ, ಭುಗಿಲ್ ಭುಗಿಲ್, ದುಘುಮ್ಮನೆ, ಹಾಗೆ, ಹಾಗಿರಲು, ಅಷ್ಟರಲ್ಲಿ ಮೊದಲಾದ ಪದಗಳನ್ನು ನಾವು ಸಾಮಾನ್ಯವಾಗಿ ಬಳಸುತ್ತೇವೆ. ಇವೆಲ್ಲ ಅವ್ಯಯಗಳು (ಇವುಗಳ ವಿಚರವಾಗಿ ಮುಂದೆ ವಿವರವಾಗಿ ತಿಳಿಯೋಣ).

ಈ ಕೆಲವು ಪದಗಳನ್ನು ಗಮನಿಸಿ : ತಿನ್ನು, ನಿಲ್ಲು, ಕೊಲ್ಲು, ಕೇಳು, ಬಾ, ಮಾಡು, ಹೋಗು ಇತ್ಯಾದಿ ಪದಗಳು ಒಂದು 'ಕ್ರಿಯೆ' ಯನ್ನು ಸೂಚಿಸುತ್ತವೆ ಆದುದರಿಂದ ಇವುಗಳು ಕ್ರಿಯಾಪದಗಳು. (ಇವುಗಳ ವಿಚಾರವಾಗಿಯೂ ಮುಂದೆ ಹೆಚ್ಚು ವಿವರಗಳನ್ನು ತಿಳಿಯೋಣ).

ಪುನಃ ಈ ಪದಗಳನ್ನು ಗಮನಿಸಿ : ಮಗು, ಹಸು, ರಾಮ, ಕಾವೇರಿ, ರಾತ್ರಿ, ಹಗಲು, ಮಾವು, ಮರ, ಬಡವ, ಕುರುಡ, ಜಿಪುಣ ಇಂತಹ ಸಾವಿರಾರು ಪದಗಳನ್ನು ನಾವು ಬಳಸುತ್ತೇವೆ. ಇವೆಲ್ಲವು **ನಾಮಪದಗಳು**. ನಾಮವಾಚಕ ವರ್ಗಕ್ಕೆ ಸೇರಿದವುಗಳು.

ನಾಮಪದದ ವ್ಯಾಪ್ತಿ ಬಹಳ ವಿಸ್ತಾರವಾದುದು. ನಾಮವಾಚಕ ವರ್ಗದಲ್ಲಿ ಸೇರದ ವಸ್ತು ವಿಷಯಗಳೇ ಇಲ್ಲ ಎನ್ನುತ್ತಾರೆ. ನಾಮಪದ ಮೂಲ ರೂಪವನ್ನು ನಾಮಪ್ರಕೃತಿ ಅಥವಾ ಪ್ರಕೃತಿರೂಪ ಎನ್ನುತ್ತೇವೆ. ನಾಮಪದಗಳನ್ನು ಅವುಗಳು ಸೂಚಿಸುವ 'ವಸ್ತು' ಮತ್ತು 'ವಿಷಯ' ಗಳನ್ನು ಅನುಸರಿಸಿ ರೂಢನಾಮ, ಅಂಕಿತನಾಮ, ಭಾವನಾಮ ಮತ್ತು ಅನ್ವರ್ಥನಾಮ ಎಂದು ನಾಲ್ಕು ವಿಭಾಗಗಳನ್ನಾಗಿ ವಿಂಗಡಿಸಲಾಗುತ್ತದೆ.

**ರೂಢನಾಮ** : ರೂಢಿಯಿಂದ ನಮ್ಮಲ್ಲಿ ಬಳಕೆಗೆ ಬಂದಿರುವ ಪದಗಳನ್ನು ನಾವು ರೂಢನಾಮಗಳು ಎನ್ನುತ್ತೇವೆ. ಮರ, ಗಿಡ, ಬಳ್ಳಿ, ಆಕಾಶ, ಹುಡುಗ, ಗಂಡು, ಹೆಣ್ಣು, ಹುಲಿ, ಕಾಡು, ನದಿ, ಮಳೆ, ಶಾಲೆ, ಹಣ್ಣು ಮೊದಲಾದ ಪದಗಳನ್ನು ಉದಾಹರಣೆಯಾಗಿ ನೋಡಬಹುದು. ಇಲ್ಲಿರುವ ಮರ ಎಂಬ ಪದ ಯಾವುದೇ ನಿರ್ದಿಷ್ಟವಾದ ಒಂದು ಜಾತಿಯ ಮರವನ್ನು ಸೂಚಿಸುವುದಿಲ್ಲ. (ಮಾವಿನ ಮರ ಎಂದಾಗ ಮಾತ್ರ ಅದು ನಿರ್ದಿಷ್ಟ ಮರವನ್ನು ಸೂಚಿಸುತ್ತದೆ) ಇವುಗಳೆಲ್ಲ ಸಾಮಾನ್ಯವಾಚಕಗಳು.

**ಅಂಕಿತನಾಮ** : ರೂಢನಾಮಕ್ಕೆ ಉದಾಹರಣೆಯಾಗಿ ನೀಡಿದ 'ಮರ' ಪದವನ್ನು ನೆನಪಿಸಿಕೊಳ್ಳಿ. ಅಲ್ಲಿ 'ಮರ' ಎಂಬುದು ಸಾಮಾನ್ಯವಾಚಕವಾಗಿ ಪ್ರಯೋಗವಾಗಿರುವುದನ್ನು ಗಮನಿಸದ್ದೀರಿ ಹಾಗೆಯೇ 'ಮಾವಿನ ಮರ' ಎಂದಾಗ ಅದು ಒಂದು ನಿರ್ದಿಷ್ಟ ವಸ್ತುವನ್ನು ಸೂಚಿಸುವುದನ್ನು ತಿಳಿದಿದ್ದೀರಿ. ಹೀಗೆ ಒಂದು ನಿರ್ದಿಷ್ಟ ವಸ್ತುವನ್ನು ಸೂಚಿಸುವ ಪದಗಳು ಅಂಕಿತ ನಾಮಗಳು. 'ಬೆಟ್ಟ' ಸಾಮಾನ್ಯವಾಚಕವಾದರೆ ಚಾಮುಂಡಿಬೆಟ್ಟ, ತಿರುಪತಿ ಬೆಟ್ಟ, ಗೌರೀಶಂಕರ ಶಿಖರ ಮೊದಲಾದುವು ಅಂಕಿತನಾಮಗಳಾಗುತ್ತವೆ. ಹಾಗೆಯೇ ಮನುಷ್ಯ ರೂಢವಾಮ ಆದರೆ ರಾಮ, ಕೃಷ್ಣ, ಅರ್ಜುನ, ಗುಬ್ಬಿವೀರಣ್ಣ, ಬೇಂದ್ರೆ, ಕುವೆಂಪು, ಸಚಿನ್ ತೆಂಡೂಲ್ಕರ್ ಮೊದಲಾದ ಪದಗಳು ಅಂಕಿತನಾಮಗಳು. ಅಂದರೆ ಒಂದು ವಸ್ತು, ವ್ಯಕ್ತಿ ಮತ್ತು ಪ್ರದೇಶ ಮುಂತಾದುವನ್ನು ನಿರ್ದಿಷ್ಟವಾಗಿ ಈ ಪದಗಳು ಸೂಚಿಸುತ್ತವೆ.

**ಅನ್ವರ್ಥನಾಮ** : ಒಂದು ಪದಕ್ಕೆ (ನಾವು ನೀಡಿ) ಇರುವ ಅರ್ಥವನ್ನೇ ಪ್ರಧಾನವಾಗಿ ಪರಿಗಣಿಸಿ ಬಳಸುವ ಪದಗಳನ್ನು ಅನ್ವರ್ಥ ನಾಮಗಳೆಂದು ಕರೆಯುತ್ತೇವೆ. ಉದಾ : ಕುಂಟ, ಕುರುಡ, ಹೆಳವ, ಮೂಗ, ಕರಿಯ, ಕೆಂಚ ಮೊದಲಾದವುಗಳನ್ನು ನೋಡಬಹುದು. ಈ ಬಗೆಯ ಪದಗಳು ನಾವು ಕುರಿತು ಹೇಳುವ ವ್ಯಕ್ತಿ ಮತ್ತು ವಸ್ತುವಿನ ಸ್ಥಿತಿಯನ್ನು ಮುಖ್ಯವಾಗಿ ಹೇಳುತ್ತವೆ. **ಅನ್ವರ್ಥವಾಮ** ಎಂದಲ್ಲದೆ ಇದನ್ನು **ಅನ್ವರ್ಥಕನಾಮ** ಎಂದೂ ಕರೆಯಲಾಗುತ್ತದೆ.

**ಭಾವನಾಮ** : ಒಂದು ವಸ್ತು ಅಥವಾ ವ್ಯಕ್ತಿಯ ಬಗೆಗಿನ ಭಾವವನ್ನು ಸೂಚಿಸುವ ಪದಗಳು ಭಾವನಾಮಗಳು. ಬಡತನ, ಬಿಳುಪು, ಕುರುಡುತನ, ಸಣ್ಣತನ, ಜಿಪುಣತನ, ಔದಾರ್ಯ ಮುಂತಾದ ಪದಗಳನ್ನು ಇದಕ್ಕೆ ಉದಾಹರಣೆಯಾಗಿ ಗಮನಿಸಬಹುದು.

ಹಳಗನ್ನಡ ವ್ಯಾಕರಣವನ್ನು ರಚಿಸಿದ ಕೇಶಿರಾಜನು (13 ಶತಮಾನ) ತನ್ನ ಶಬ್ದಮಣಿದರ್ಪಣದಲ್ಲಿ ಮೂರು ಬಗೆಯ ನಾಮಪದಗಳನ್ನು ಹೇಳುತ್ತಾನೆ. 'ರೂಢನಾಮಂ ಪ್ರಸಿದ್ಧತದಮಾಗಿರ್ಪುದು: ಅನ್ವರ್ಥನಾಮಂ ಗುಣಕ್ಕಂ ಅರ್ಥಕ್ಕಂ ಅನುರೂಪಮಾಗಿರ್ಪುದು; ಅಂಕಿತನಾಮಂ ಪೆಸದನಿಡುವವನ ಇಷ್ಟದಿಂದ - ಇಂತಾದೊಡಂ ಇರ್ಪುದು: ಇಂತು ನಾಮಂ ಮೂಱುತೆಱನಪ್ಪುದು' ಎಂಬುದನ್ನು ಗಮನಿಸಬಹುದು.

| | |
|---|---|
| ರೂಢವಾಮಕ್ಕೆ : | ನೆಲಂ ಪೊಲಂ, ಜಲಂ, ಚಲಂ |
| ಗುಣಾನುರೂಪನಾಮಕ್ಕೆ : | ದಾನಿದಯಾಪರನತ್ಯಭಿಮಾನಿ ಪರಾಕ್ರಮಿ |
| ಅರ್ಥಾನುರೂಪನಾಮಕ್ಕೆ : | ಹಿಳ್ಳೆಗಾಲಂ (=ಹೆಳವ) ನಿಡುಮೂಗಂ<br>ಕುಸಿಗೊರಲಂ.... ಗುಟಿಗಣ್ಣಂ<br>ಹಜಿದಲೆಯಂ |
| ಅಂಕಿತನಾಮಕ್ಕೆ : | ದೂಳಿಗಂ, ಕಾಟಂ, ಕಸವಂ, ತಿಪ್ಪಂ, ಮಾಚಂ, ಮಾರಂ,<br>ಕೇತಂ, ಎಂಬವು ಮೊದಲಾದವು. |

ಕನ್ನಡ ಭಾಷೆಯಲ್ಲಿ ನಾಮಪದಗಳು ಪ್ರಯೋಗಗೊಂಡಿರುವ ರೀತಿಯಲ್ಲಿ ಗಮನಿಸಬೇಕಾದ ಒಂದು ಸಂಗತಿಯಿದೆ. ಕೇಶಿರಾಜನು ಕೊಡುವ ಉದಹಾರಣೆಗಳಿಂದಲೇ ಆರಂಭಿಸುವುದಾದರೆ ನೆಲಂ

ಎಂಬ ಹಳಗನ್ನಡ ರೂಢನಾಮವು ನೆಲವು ಎಂದು ನಡುಗನ್ನಡದ ಕಾಲಕ್ಕೂ ನೆಲ ಎಂದು ಹೊಸಗನ್ನಡ ಕಾಲಕ್ಕೂ ಪ್ರಯೋಗವಾಗುತ್ತ ಬಂದಿದೆ.

| ಹಳಗನ್ನಡ | ನಡುಗನ್ನಡ | ಹೊಸಗನ್ನಡ |
|---|---|---|
| ನೆಲಂ | ನೆಲವು | ನೆಲ |
| ಜಲಂ | ಜಲವು | ಜಲ |
| ಗುಳಿಗಣ್ಣಂ | ಗುಳಿಗಣ್ಣನು | ಗುಳಿಗಣ್ಣ |
| ಮರಂ | ಮರವು | ಮರ |

ನಾಮಪದವು ಲಿಂಗ ವಚನ ಮತ್ತು ವಿಭಕ್ತಿಯನ್ನು ಒಳಗೊಂಡೇ ಇರುತ್ತದೆ. ಉದಾ : ಮರ ಎಂಬ ಪದವು ನಪುಂಸಕಲಿಂಗ, ಏಕವಚನ ಮತ್ತು ಪ್ರಥಮಾ ವಿಭಕ್ತಿಗಳನ್ನು ಒಳಗೊಂಡಿದೆ. (ಲಿಂಗ ವಚನ ವಿಭಕ್ತಿ ಪ್ರತ್ಯಯಗಳ ಬಗ್ಗೆ ಮುಂದೆ ವಿವರವಾಗಿ ತಿಳಿಯದಿದ್ದೀರಿ) ನೆಲಂ ಮರಂ ಎಂಬಲ್ಲಿ 'ಮ್' ಎಂಬುದು ಪ್ರಥಮಾ ವಿಭಕ್ತಿ ಪ್ರತ್ಯಯದ ರೂಪವಾಗಿಯು ನೆಲವು, ಮರವು ಎಂಬಲ್ಲಿ 'ಉ' ಎಂಬುದು ಪ್ರಥಮಾ ವಿಭಕ್ತಿ ಪ್ರತ್ಯಯದ ರೂಪವಾಗಿಯೂ ಪ್ರಯೋಗ ಗೊಂಡಿದೆ.

ನಾಮಪದಗಳು ಲಿಂಗ ವಚನ ವಿಭಕ್ತಿ ಪ್ರತ್ಯಯಗಳನ್ನು ಹತ್ತಿಸಿಕೊಂಡೇ ಇರುವುದರಿಂದ ನಾಮಪದಗಳನ್ನು ಕುರಿತ ಈ ಪಾಠಭಾಗದಲ್ಲಿ ಲಿಂಗ ವಚನ ವಿಭಕ್ತಿ ಪ್ರತ್ಯಯಗಳನ್ನು ಕುರಿತೆ ಪ್ರಸ್ತಾಪವನ್ನು ಮಾಡೋಣ.

## 3.4. ಲಿಂಗ

ಒಬ್ಬ ವ್ಯಕ್ತಿ ಅಥವಾ ವಸ್ತುವನ್ನು ಕುರಿತು ಹೇಳುವಾಗ ಆ ವ್ಯಕ್ತಿ ಅಥವಾ ವಸ್ತು ಯಾವ ಲಿಂಗ (ವರ್ಗ) ಕ್ಕೆ ಸೇರಿದ್ದು ಎಂಬುದನ್ನು ಗುರುತಿಸಿ ಹೇಳುತ್ತೇವೆ.

| | | |
|---|---|---|
| ಉದಾ: | ಗಂಡಸು, ರಾಮ | ಪುಲ್ಲಿಂಗ |
| | ಹೆಂಗಸು, ಗೌರಿ | ಸ್ತ್ರೀಲಿಂಗ |
| | ನೀರು, ನಲ್ಲಿ | ನಪುಂಸಕಲಿಂಗ |

ಕನ್ನಡ ಭಾಷೆಯ ಬಗ್ಗೆ ಸಾಮಾನ್ಯ ತಿಳುವಳಿಕೆ ಇರುವವರಿಗೆ ಸಾಮಾನ್ಯವಾಗಿ ಈ ಮೂರು ಬಗೆಯ ಲಿಂಗಗಳ ಪರಿಚಯ ಇರುತ್ತದೆ. ಕನ್ನಡ ವ್ಯಾಕರಣಕಾರ ಕೇಶಿರಾಜನು ಲಿಂಗಗಳು ಒಂಬತ್ತು ಬಗೆಯಾಗಿರುತ್ತವೆ ಎನ್ನುತ್ತಾನೆ. ಸಂಸ್ಕೃತದಲ್ಲಿ ಒಂಬತ್ತು ಬಗೆಯ ಲಿಂಗಗಳ ಕಲ್ಪನೆ ಇದೆ. ಕೇಶಿರಾಜ ಕನ್ನಡಕ್ಕೆ ಇದನ್ನೇ ಅನ್ವಯಿಸಿದ್ದಾನೆ. (ಇವುಗಳ ಬಗ್ಗೆ ಹೆಚ್ಚಿನ ವಿವರಗಳನ್ನು ಹತ್ತನೆಯ ಸಂಚಿಕೆಯಲ್ಲಿ ನೋಡಬಹುದು) ಕೇಶಿರಾಜ ಒಂಬತ್ತು ಬಗೆಗಳನ್ನು ಹೇಳಿದರೂ ವ್ಯವಹಾರಕ್ಕೆ ಈ ಮೂರು ಬಗೆಯ ಲಿಂಗ ವಿಂಗಡಣೆ ಸಾಕಾಗುತ್ತದೆ ಎನ್ನುತ್ತಾನೆ. ಲಿಂಗಗಳನ್ನು ಹೀಗೆ ಪುಲ್ಲಿಂಗ, ಸ್ತ್ರೀಲಿಂಗ, ನಪುಂಸಕಲಿಂಗ ಎಂದು ವಿಂಗಡಿಸುವ ಕ್ರಮ ದ್ರಾವಿಡ ಭಾಷಾ ಜಾಯಮಾನದ್ದಲ್ಲ. ನಿಮಗೆ ಈಗಾಗಲೇ ತಿಳಿದಿರುವಂತೆ

ಕನ್ನಡವು ದ್ರಾವಿಡ ಭಾಷಾ ವರ್ಗಕ್ಕೆ ಸೇರಿದ ಭಾಷೆ. ದ್ರಾವಿಡ ಭಾಷೆಗಳಿಗೆ ಪ್ರತ್ಯೇಕವಾದ ಸ್ವರೂಪ ಲಕ್ಷಣಗಳಿವೆ. ಅದರಂತೆ ಲಿಂಗಗಳನ್ನು ಕುರಿತ ಪರಿಕಲ್ಪನೆಯಲ್ಲಿಯೂ ದ್ರಾವಿಡ ಭಾಷೆ ಭಿನ್ನವಾಗಿದೆ. ಈ ಮಾತು ಕನ್ನಡಕ್ಕೂ ಅನ್ವಯವಾಗುತ್ತದೆ.

ಕನ್ನಡದಲ್ಲಿ ಲಿಂಗ ನಿರ್ಧರಿಸುವಲ್ಲಿ ಅರ್ಥ ಮುಖ್ಯವಾಗುತ್ತದೆಯೇ ಹೊರತು ಶಬ್ದವಲ್ಲ. ದ್ರಾವಿಡ ಭಾಷೆಗಳಲ್ಲಿ ಶಬ್ದಗಳನ್ನು **ಮಹತ್** ಮತ್ತು **ಅಮಹತ್** ಎಂದು ಎರಡು ವರ್ಗಗಳಾಗಿ ವಿಂಗಡಿಸಲಾಗುತ್ತದೆ. ಒಂದು ವಸ್ತು ಅಥವಾ ವ್ಯಕ್ತಿ ಬುದ್ಧಿಶಕ್ತಿ ಉಳ್ಳದ್ದೇ ಅಥವಾ ಬುದ್ಧಿಶಕ್ತಿ ಇಲ್ಲದ್ದೇ ಅಥವಾ ಬುದ್ಧಿಶಕ್ತಿ ಕಡಿಮೆ ಇರುವುದೇ ಎಂಬುದನ್ನು ಆಧರಿಸಿ ಲಿಂಗ-ವರ್ಗ ವಿಂಗಡಣೆ ಮಾಡಲಾಗುತ್ತದೆ. ಬುದ್ಧಿಶಕ್ತಿ ಇರುವುದನ್ನು ಸೂಚಿಸುವ ಪದಗಳು ಮಹತ್ ವರ್ಗ (=ಮೇಲುವರ್ಗ) ಕ್ಕೂ, ಬುದ್ಧಿ ಶಕ್ತಿ ಇಲ್ಲದ ಅಥವಾ ಕಡಿಮೆ ಇರುವುದನ್ನು ಸೂಚಿಸುವ ಪದಗಳು ಅಮಹತ್ (=ಕೆಳವರ್ಗ) ವರ್ಗಕ್ಕೂ ಸೇರುತ್ತವೆ.

ಮಗು ಬಂದಿತು, ಅದು ನಗುತ್ತಲಿದೆ

ಈ ಮೇಲಿನ ವಾಕ್ಯವನ್ನು ಗಮನಿಸಿ. ಬಂದಿತು ಎಂಬ ಪ್ರಯೋಗ ಸಾಮಾನ್ಯ ಅರ್ಥದಲ್ಲಿ ನಪುಂಸಕಲಿಂಗ ಪದಕ್ಕೆ ಬಳಸುವಂಥದ್ದು. ಉದಾ : ಹಸು ಬಂದಿತು ಎಂಬಂತೆ. ಆದರೆ ನಪುಂಸಲಿಂಗಕ್ಕೆ ಬಳಸುವ ಶಬ್ದಪ್ರಯೋಗವನ್ನು (ಗಂಡೋ ಅಥವಾ ಹೆಣ್ಣೋ ಆಗಿರುವ) ಮಗುವಿಗೂ ಬಳಸುತ್ತಿದ್ದೇವೆ. ಇದಕ್ಕೆ ಮುಖ್ಯ ಕಾರಣ ದ್ರಾವಿಡ ಭಾಷೆಗಳ ಲಿಂಗ ವಿಂಗಡಣೆ ಅರ್ಥಾನುಸಾರಿಯಾಗಿರುವುದೇ ಆಗಿದೆ. ಮಗು ಎಂಬ ಪದ ಗಂಡು ಅಥವಾ ಹೆಣ್ಣನ್ನು ಸ್ಪಷ್ಟವಾಗಿ ಕುರಿತದ್ದೇ ಆಗಿದ್ದರೂ ಬುದ್ಧಿಶಕ್ತಿಯು ಕಡಿಮೆ ಇರುವ ಕಾರಣ ಇದನ್ನು ನಪುಂಸಕ ಲಿಂಗದಂತೆ ಬಳಸುತ್ತೇವೆ. ದ್ರಾವಿಡ ಭಾಷೆಗಳ ಪ್ರಕಾರ ಮಗು ಪದ ಅಮಹತ್ ವರ್ಗಕ್ಕೆ ಸೇರಿದ್ದಾಗಿದೆ. ಗಂಡು ಹೆಣ್ಣು ಎಂದು ಸೂಚಿತವಾಗುತ್ತಿರುವ ಪ್ರಾಣಿಗಳನ್ನು ಕುರಿತ ಪದಗಳೂ ಅಮಹತ್ ವರ್ಗಕ್ಕೆ ಸೇರುತ್ತವೆ. ಇತರ ದ್ರಾವಿಡ ಭಾಷೆಗಳಾದ ತಮಿಳು, ತೆಲುಗು ಬಾಷೆಗಳಲ್ಲೂ ಲಿಂಗ ವಿಂಗಡಣೆ ಹೀಗೆಯೇ ಇರುವುದು. ತಮಿಳಿನಲ್ಲಿ ಮಹತ್ ವರ್ಗಕ್ಕೆ ಉಯರ್‌ತಿಣ್ಣೈ ಎಂತಲೂ ಅಮಹತ್ ವರ್ಗಕ್ಕೆ ಅಟ್ರಿಣ್ಣೈ ಎಂತಲೂ ಕರೆಯಲಾಗುತ್ತದೆ.

ದ್ರಾವಿಡ ಭಾಷೆಗಳಲ್ಲಿ (ಕನ್ನಡವನ್ನೂ ಸೇರಿಕೊಂಡಂತೆ) ಲಿಂಗ ವಿಂಗಡಣೆ ಎರಡೇ ವರ್ಗವಾಗಿ ಇದ್ದರೂ: ಅರ್ಥಾನುಸಾರಿಯಾದುದಾಗಿದ್ದರೂ: ಕನ್ನಡದಲ್ಲಿ ಬಳಕೆಯಲ್ಲಿರುವುದು ಲಿಂಗಾನುಸಾರಿಯಾದ ಪುಲ್ಲಿಂಗ, ಸ್ತ್ರೀಲಿಂಗ ಮತ್ತು ನಪುಂಕಲಿಂಗಳೆಂಬ ವಿಂಗಡಣೆ ಎಂಬುದನ್ನು ಗಮನಿಸಬೇಕು.

ಕೇಶಿರಾಜ ಒಂಬತ್ತು ಬಗೆಯ ಲಿಂಗಗಳನ್ನು ಹೇಳಿದರೂ ಕಡೆಗೆ ಅವನೇ ಕನ್ನಡದಲ್ಲಿ ಮೂರು ಲಿಂಗಗಳು ಮುಖ್ಯ ಎನ್ನುತ್ತಾನೆ. ಉಳಿದ ಆರು ಲಿಂಗಗಳು ಹೆಚ್ಚು ಪರಿಗಣಿತವಾಗಿಲ್ಲ ಎನ್ನುತ್ತಾನೆ.

## 3.5. ವಚನ

ವಚನ ಎಂಬುದು (ವ್ಯಾಕರಣ ಶಾಸ್ತ್ರದಲ್ಲಿ) ಸಂಖ್ಯೆಯನ್ನು ಗುರುತಿಸುವ ಪದ. ಒಂದು ವಸ್ತು, ಪ್ರಾಣಿ ಅಥವಾ ಒಬ್ಬ ವ್ಯಕ್ತಿಯನ್ನು ಕುರಿತು ಹೇಳುವಾಗ **ಏಕವಚನ** ; ಒಂದಕ್ಕಿಂತ ಹೆಚ್ಚು ಅಥವಾ ಒಬ್ಬರಿಗಿಂತ ಹೆಚ್ಚು ಸಂಖ್ಯೆಯನ್ನು ಹೇಳುವಾಗ **ಬಹುವಚನ** ಪ್ರಯೋಗ ರೂಢಿಯಲ್ಲಿದೆ. ಇದರ ಪ್ರಕಾರ ಕನ್ನಡದಲ್ಲಿ ಏಕವಚನ ಮತ್ತು ಬಹುವಚನ ಎಂಬ ಎರಡು ಬಗೆಯ ವಚನಗಳಿರುವುದಾಗಿ ತಿಳಿಯುತ್ತದೆ.

ಮರ (ಏಕ ವಚನ)
ಮರಗಳು (ಬಹುವಚನ)

**ಗಳು, ಕಳು, ದಿರು, ಅವು,** ವರು ಮೊದಲಾದವು ಬಹುವಚನ ಪ್ರತ್ಯಯಗಳು.

ಮರ - ಮರಗಳು
ಮಗು - ಮಕ್ಕಳು
ಅಕ್ಕಂ - ಅಕ್ಕಂದಿರು
ಸೋದರಿ - ಸೋದರಿಯರು

ಸಾಮಾನ್ಯವಾಗಿ ಪುಲ್ಲಿಂಗ ಸ್ತ್ರೀಲಿಂಗ ಸೂಚಿಸುವ ನಾಮಪದಗಳ ಮೇಲೆ **ಅರು** ಪ್ರತ್ಯಯ/ ಆಗಮ ಬರುತ್ತದೆ.

ಉದಾ: ಅರಸ - ಅರಸರು
ಸ್ತ್ರೀ - ಸ್ತ್ರೀಯರು

ಬಂಧುವಾಚಕಗಳ ಮೇಲೆ **ಅರು, ದಿರು, ಗಳು** ಪ್ರತ್ಯಯಗಳಾಗಿ ಹತ್ತುತ್ತವೆ.

ಹೆಂಡತಿ - ಹೆಂಡತಿಯರು
ಅಣ್ಣ - ಅಣ್ಣಂದಿರು

ವಿರ್ ಎಂಬ ಪ್ರತ್ಯಯ ಹಳಗನ್ನಡದಲ್ಲಿ ಮಾತ್ರ ಬಳಕೆಯಾಗುತ್ತಿತ್ತು. ಉದಾ: ತಾಯ್ವಿರ್, ಅತ್ತೆವಿರ್. ಸರ್ವನಾಮಗಳಾದ ಅವನು-ಅವಳು ಮೊದಲಾದ ಎಂಬ ಪುಲ್ಲಿಂಗ ಸ್ತ್ರೀಲಿಂಗ ವಾಚಕ ಬಹುವಚನವಾಗಿ **ಅವರು** ಎಂಬ ರೂಪವು, ನಪುಂಸಕಲಿಂಗ ಸೂಚಿಯಾದ **ಅದು** ಗೆ **ಅವು** ಎಂಬ ರೂಪವು ಪ್ರಯೋಗಗೊಳ್ಳುತ್ತದೆ. ಸಂಖ್ಯಾವಾಚಕಗಳಲ್ಲಿ **ವರು** ಪ್ರತ್ಯಯ ಬರುತ್ತದೆ. ಮೂವರು, ನಾಲ್ವರು ಇತ್ಯಾದಿ.

ಕನ್ನಡದಲ್ಲಿ ಏಕ ಮತ್ತು ಬಹುವಚನವೆಂದು ಈ ಎರಡು ವಚನಗಳನ್ನು ಹೇಳಿದರೂ ಕೇಶಿರಾಜ ದ್ವಿವಚನ ಮುಚಿತದೆ ಬರ್ಕುಂ ಎಂದು ದ್ವಿವಚನ ಎಂಬ ಮತ್ತೊಂದು ವಚನವನ್ನು ಕನ್ನಡಕ್ಕೆ ಹೇಳುತ್ತಾನೆ. ಕಣ್ಣು, ಕಿವಿ, ಕೈ ಸಂಖ್ಯೆಯಲ್ಲಿ ಎರಡೇ ಆಗಿರುವುದರಿಂದ ಇವುಗಳನ್ನು ದ್ವಿವಚನ ವೆಂದು ಪರಿಭಾವಿಸಬೇಕೆಂಬುದು ಕೇಶಿರಾಜನ ಅಭಿಪ್ರಾಯ.

ಬಹುವಚನವು ಒಂದಕ್ಕಿಂತ ಹೆಚ್ಚು ಸಂಖ್ಯೆಯನ್ನು ಸೂಚಿಸಲು ಸಾಮಾನ್ಯವಾಗಿ ಬಳಕೆಯಾಗುವುದಾದರೂ, ಕೆಲವು ವಿಶೇಷ ಸಂದರ್ಭಗಳಲ್ಲಿ ಒಂದೇ ವಸ್ತುವಿದ್ದಾಗಲೂ ಒಬ್ಬರೇ ವ್ಯಕ್ತಿ ಇದ್ದಾಗಲೂ ಬಹುವಚನ ಪ್ರಯೋಗವಾಗುತ್ತದೆ.

ಉದಾ ಇವರು ಅವನ ತಂದೆ

ಇವರು ಆ ಮಠದ ಸ್ವಾಮಿಗಳು

ಈ ವಾಕ್ಯಗಳನ್ನು ಗಮನಿಸಿ. **ಇವರು** ಎಂಬುದು **ಇವನು** ಎಂಬುದರ ಬಹುವಚನ ರೂಪ. ಇಬ್ಬರು ಅಥವಾ ಇಬ್ಬರಿಗಿಂತ ಹೆಚ್ಚು ವ್ಯಕ್ತಿಗಳು ಇದ್ದಾಗ ಬಳಸಬೇಕಾದ ರೂಪ. ಆದರೆ ಮೇಲಿನ ವಾಕ್ಯದಲ್ಲಿ ವ್ಯಕ್ತಿ ಒಬ್ಬನೇ ಆದರೆ ವ್ಯಕ್ತಿಸೂಚಕವಾಗಿ **ಇವರು** ಎಂಬ ಬಹುವಚನ ಸೂಚಕ ಪದ ಪ್ರಯೋಗವಾಗಿದೆ. ಗೌರವ ಅಥವಾ ವಿನಯ ಸೂಚಿಸುವ ಸಂದರ್ಭಗಳಲ್ಲಿ ಹೀಗೆ ವಚನ ಬದಲಾಗುತ್ತದೆ. ಇದನ್ನು **ವಚನ ಪಲ್ಲಟ** ಎನ್ನಲಾಗುತ್ತದೆ. ಕೇಶಿರಾಜ ಇನ್ನು ಕೆಲವು ವಿವರಗಳನ್ನು ಈ ಪಲ್ಲಟದ ಬಗ್ಗೆ ಹೇಳಿದ್ದಾನೆ.

## 3.6. ವಿಭಕ್ತಿ

ನಾಮ ಪ್ರಕೃತಿಗಳಿಗೆ ಹತ್ತುವ ಪ್ರತ್ಯಯಗಳನ್ನು ನಾವು **ವಿಭಕ್ತಿ ಪ್ರತ್ಯಯಗಳು** ಎಂದು ಕರೆಯಲಾಗುತ್ತದೆ. ಇವಕ್ಕೆ **ವಿಭಕ್ತಿ ಪ್ರತ್ಯಯಗಳೆಂದೂ**, (ಅನೇಕ ವೇಳೆ ಕೇವಲ) **ಪ್ರತ್ಯಯಗಳೆಂದು** ಕರೆಯುವುದು ರೂಢಿ. ನಾಮಪ್ರಕೃತಿಗಳಿಗಲ್ಲದೆ ಕ್ರಿಯಾಧಾತುಗಳಿಗೆ ಹತ್ತುವ ಪ್ರತ್ಯಯಗಳೂ ಇವೆ. ಅವುಗಳಿಗೆ **ಆಖ್ಯಾತ ಪ್ರತ್ಯಯಗಳು** ಎಂದು ಹೆಸರು. ಆಖ್ಯಾತ ಪ್ರತ್ಯಯಗಳ ಬಗ್ಗೆ ಮುಂದೆ ಗಮನಿಸಲಿದ್ದೇವೆ. ಸದ್ಯಕ್ಕೆ ಮೊದಲಿಗೆ ನಾಮ ಪ್ರಕೃತಿಗಳಿಗೆ ಹತ್ತುವ ನಾಮವಿಭಕ್ತಿ ಪ್ರತ್ಯಯಗಳನ್ನು ಗಮನಿಸೋಣ.

| **ವಿಭಕ್ತಿ** | **ನಾಮಪ್ರಕೃತಿ** | + | **ಪ್ರತ್ಯಯ** | = | **ನಾಮಪದ** |
|---|---|---|---|---|---|
| ಪ್ರಥಮಾ | ಮರ | + | ಉ | = | ಮರವು |
| ದ್ವಿತೀಯಾ | ಮರ | + | ಅನ್ನು | = | ಮರವನ್ನು |
| ತೃತೀಯಾ | ಮರ | + | ಇಂದ | = | ಮರದಿಂದ |
| ಚತುರ್ಥೀ | ಮರ | + | ಕ್ಕೆ / ಗೆ | = | ಮರಕ್ಕೆ |
| ಪಂಚಮೀ | ಮರ | + | ದೆಸೆಯಿಂದ | = | ಮರದ ದೆಸೆಯಿಂದ |
| ಷಷ್ಠೀ | ಮರ | + | ಅ | = | ಮರದ |
| ಸಪ್ತಮೀ | ಮರ | + | ಅಲ್ಲಿ | = | ಮರದಲ್ಲಿ |

ಈ ಉದಾಹರಣೆಯನ್ನು ಗಮನಿಸಿ. ಮರ ಎಂಬ ನಾಮಪ್ರಕೃತಿಗೆ ಇಲ್ಲಿ ಏಳು ವಿಭಕ್ತಿ ಪ್ರತ್ಯಯಗಳನ್ನು ಹತ್ತಿಸಿ ಪ್ರಯೋಗಿಸಲಾಗಿದೆ. **ಉ, ಅನ್ನು, ಇಂದ, ಕ್ಕೆ ಗೆ, ದೆಸೆಯಿಂದ, ಅ, ಅಲ್ಲಿ** ಎಂಬುವೇ ಆ ಏಳು ವಿಭಕ್ತಿ ಪ್ರತ್ಯಯಗಳು. ಈ ಏಳು ವಿಭಕ್ತಿ ಪ್ರತ್ಯಯಗಳಲ್ಲದೆ. ಸಂಬೋಧನಾ ವಿಭಕ್ತಿ ಪ್ರತ್ಯಯ ಏ, ಆ ವನ್ನೂ ಪ್ರಯೋಗಿಸಲಾಗುತ್ತದೆ. ಇದನ್ನು ಸೇರಿಸಿಕೊಂಡರೆ ವಿಭಕ್ತಿ ಪ್ರತ್ಯಯಗಳ ಸಂಖ್ಯೆ ಒಟ್ಟು ಎಂಟು. ಕೇಶಿರಾಜ ಏಳು ವಿಭಕ್ತಿಗಳನ್ನು ಮಾತ್ರ ಹೇಳಿದ್ದಾನೆ. ಮುಮಿಂಕೆಯದದೊಳ್ ಎಂಬುದು ಅವನು ಕೊಡುವ ಸೂತ್ರ ಭಾಗ **ಮ್, ಅಮ್, ಇಂ, ಕೆ, ಅತ್, ಅದ್, ಒಳ್** ಎಂಬುದು ಅವನ ಕಾಲದ ಪ್ರತ್ಯಯ ರೂಪಗಳು.

## 1. ಪ್ರಥಮಾ ವಿಭಕ್ತಿ ಪ್ರತ್ಯಯ ( ಮ್ > ಉ )

ಪ್ರಥಮಾ ವಿಭಕ್ತಿ ಪ್ರತ್ಯಯ ಉ. ಇದರ ಪ್ರಾಚೀನರೂಪ **ಮ್**. ಸೂಕ್ಷ್ಮವಾಗಿ ಗಮನಿಸಿದರೆ ಮ್ ಎಂಬ ಪ್ರಥಮಾ ವಿಭಕ್ತಿ ಪ್ರತ್ಯಯ ಅಕಾರಾಂತವಾದ ಏಕವಚನದಲ್ಲಿರುವ ಪದಗಳಿಗೆ ಮಾತ್ರ ಅನ್ವಯವಾಗುತ್ತದೆ.

ಉದಾ: ಪೊಲಂ, ನೆಲಂ, ವನಂ ಇತ್ಯಾದಿ.

ಆದರೆ ಪುಲ್ಲಿಂಗ ಅಕಾರಾಂತ ಶಬ್ದಗಳಿಗಾಗಲಿ, ಅಕ್ಕ ಮುಂತಾದ ಕೆಲವು ಸ್ತ್ರೀಲಿಂಗ ಶಬ್ದಗಳಿಗಾಗಲಿ ಮ್ ಬದಲು ನ್ ಪ್ರಯೋಗವಾಗುತ್ತಿತ್ತು.

ಉದಾ: ರಾಮನ್, ಕೇಶವನ್, ಅಣ್ಣನ್, ಅಕ್ಕನ್.

ಕೆಲವೊಮ್ಮೆ ಅಕಾರಾಂತ ನಪುಂಸಕ ಶಬ್ದಗಳಿಗೂ ನ್ ಪ್ರತ್ಯಯದ ಬಳಕೆ ಪ್ರಾಚೀನ ಕಾಲದಲ್ಲಿ ಆಗಿದೆ.

ಉದಾ: ಕೊಳನ್

ಎಲ್ಲ ನಪುಂಸಕ ಶಬ್ದಗಳಿಗೆ ನ್ ಪ್ರತ್ಯಯ ಸೇರುವುದಿಲ್ಲ

ಉದಾ: ಹೊಳೆ

ಪ್ರಥಮಾ ವಿಭಕ್ತಿ ಪ್ರತ್ಯಯ ಕನ್ನಡದಲ್ಲಿ ಅನಿವಾರ್ಯವೇನಲ್ಲ. ಅದರ ಅಗತ್ಯವಿಲ್ಲ. ವಿಭಕ್ತಿ ಪ್ರತ್ಯಯವನ್ನು ಹತ್ತಿಸದೆಯೂ ವಾಕ್ಯಪ್ರಯೋಗವನ್ನು ಮಾಡಬಹುದು ಎಂಬ ಅಭಿಪ್ರಾಯವಿದೆ. 'ರಾಮನು (ರಾಮ+ನ್+ಉ) ಬಂದನು' ಎಂಬ ವಾಕ್ಯದಲ್ಲಿ 'ರಾಮ ಬಂದನು' ಎಂಬ ಪ್ರಯೋಗವೇ ಪೂರ್ಣ ಅರ್ಥವನ್ನು ಕೊಡುತ್ತದೆ. ಇಲ್ಲಿ ಪ್ರಥಮಾ ವಿಭಕ್ತ ಪ್ರತ್ಯಯ ಉ ಅನ್ನು ಪ್ರತ್ಯೇಕವಾಗಿ ಸೇರಿಸುವ ಅನಿವಾರ್ಯವಿಲ್ಲ. ಹಳಗನ್ನಡದಲ್ಲಿ ವ್ಯಂಜನಾಂತ ಪದಗಳೇ ಅಧಿಕವಾಗಿದ್ದು ಅವು

ಹೊಸಗನ್ನಡದ ಸಂದರ್ಭದಲ್ಲಿ ಸ್ವರಾಂತಗಳಾಗಿವೆ. ಹಾಗೆ ಸ್ವರಾಂತವಾಗುವಾಗ 'ಉ' ಕಾರಾಂತವಾದುದೆ ಹೆಚ್ಚು. ಹೀಗೆ, ಪ್ರಥಮಾ ವಿಭಕ್ತಿ ಪ್ರತ್ಯಯ ಹತ್ತದ ಹಳಗನ್ನಡ ವ್ಯಂಜನಾಂತ ಪದಗಳು ಹೊಸಗನ್ನಡದಲ್ಲಿ ಉಕಾರಾಂತಗಳಾದಾಗ ಉ ಕಾರಾಂತವಾದ ಈ ಪ್ರಯೋಗವನ್ನೇ ಪ್ರಥಮಾ ವಿಭಕ್ತಿ ಪ್ರತ್ಯಯವೆಂದು ತಪ್ಪಾಗಿ ಭಾವಿಸಿದ್ದೂ ಉಂಟು.

| ಹಳಗನ್ನಡ ರೂಪ | ಹೊಸಗನ್ನಡ ರೂಪ |
|---|---|
| ರಾಮನ್ | ರಾಮನು |

ಹಳಗನ್ನಡದ ಪ್ರಯೋಗ ನ್ ಹೊಸಗನ್ನಡದಲ್ಲಿ ಸ್ವರಾಂತವಾಗಿ ನು ಎಂದು ಪ್ರಯೋಗವಾಗಿದೆ ಅಷ್ಟೇ ಹೊರತು: ಹೊಸಗನ್ನಡ ಪದ, 'ರಾಮನು' ನಲ್ಲಿರುವುದು ಪ್ರಥಮಾ ವಿಭಕ್ತಿ ಪ್ರತ್ಯಯ ರೂಪವಾದ 'ಉ' ಅಲ್ಲ. ಹೀಗೆ 'ಉ' ಕಾರಾಂತವಾಗುವ ಬಗೆ ಇತರ ಭಾಷೆಗಳಿಂದ ಪಡೆದ ಪದಗಳಲ್ಲಿಯೂ ಕಾಣಿಸಿಕೊಳ್ಳುತ್ತದೆ. ಹೋಟೆಲ್ > ಹೊಟೆಲು, ರೋಡ್ > ರೋಡು. (ಉತ್ತರ ಕರ್ನಾಟಕ ಪ್ರದೇಶದ ಕನ್ನಡದಲ್ಲಿ 'ಉ' ಕಾರಾಂತಕ್ಕೆ ಬದಲು 'ಅ' ಕಾರಾಂತ ಪ್ರಯೋಗವಿರುವುದನ್ನು ಗಮನಿಸಿ).

ಕನ್ನಡಕ್ಕೆ ಪ್ರತ್ಯೇಕವಾದ ಪ್ರಥಮ ವಿಭಕ್ತಿ ಪ್ರತ್ಯಯದ ಅಗತ್ಯವಿಲ್ಲವೆಂಬುದು ಆಧುನಿಕ ಭಾಷಾವಿಜ್ಞಾನಿಗಳ ಅಭಿಮತ. ನಾಮ ಪ್ರಕೃತಿಯೇ ಪ್ರಥಮಾ ವಿಭಕ್ತಿ ಕಾರ್ಯವನ್ನು ನಿರ್ವಹಿಸುತ್ತದೆ. ಬಹುವಚನದಲ್ಲಿ ಬಹುವಚನ ಪ್ರತ್ಯಯವೇ ಪ್ರಥಮಾ ವಿಭಕ್ತಿ ಕಾರ್ಯವನ್ನು ನಿರ್ವಹಿಸುತ್ತದೆ.

### 2. ದ್ವಿತೀಯಾ ವಿಭಕ್ತಿ ಪ್ರತ್ಯಯ ( ಅಂ > ಅನ್ನು )

ಅಂ ಎಂಬುದು ಹಳಗನ್ನಡ ದ್ವಿತೀಯಾ ವಿಭಕ್ತಿ ಪ್ರತ್ಯಯ. **ಕಾವ್ಯಮಂ ಪೇೞ್ವಂ** ಎಂಬ ಉದಾಹರಣೆಯನ್ನು ಗಮನಿಸಿ. **ಕಾವ್ಯಮಂ** ಎಂಬುದು **ಕಾವ್ಯವನ್ನು** ಎಂಬ ಅರ್ಥದಲ್ಲಿ ಪ್ರಯೋಗಗೊಂಡಿದೆ.

| | | |
|---|---|---|
| ಕಾವ್ಯ + ಅಂ | = | ಕಾವ್ಯಮಂ |
| ಕಾವ್ಯ + ಅನ್ನು | = | ಕಾವ್ಯವನ್ನು |

'ಅನ್' ಎಂಬ ರೂಪವು ಹಳಗನ್ನಡ ರೂಪವಾಗಿರಬೇಕೆಂಬ ಒಂದು ಅಭಿಪ್ರಾಯವಿದೆ. **ಸಿಂಗಮನ್, ಶೀಲಮಾನ್** ಎಂಬ ರೂಪಗಳು ಹಳಗನ್ನಡ ಭಾಷೆಯ ಶಾಸನಗಳಲ್ಲಿ ಲಭ್ಯ. ನಡುಗನ್ನಡದಲ್ಲಿ 'ಅನು' ಎಂಬ ರೂಪ ಕಾಣಿಸಿಕೊಂಡಿದೆ. 'ಕೃಷ್ಣನನು ಕರೆ' ಎಂಬ ಪ್ರಯೋಗವಿದೆ. ಹೀಗಾಗಿ ದ್ವಿತೀಯಾ ವಿಭಕ್ತಿ ಪ್ರತ್ಯಯದ ಈ ಮೂರು ರೂಪಗಳನ್ನು ನಾವು ಕಾಣಬಹುದು.

| ಹಳಗನ್ನಡ | | ನಡುಗನ್ನಡ | | ಹೊಸಗನ್ನಡ |
|---|---|---|---|---|
| ಅಂ / ಅನ್ | > | ಅನು | > | ಅನ್ನು |

**3. ತೃತೀಯಾ ವಿಭಕ್ತಿ ಪ್ರತ್ಯಯ ( ಇಂ > ಇಂದ )**

ಹಳಗನ್ನಡದಲ್ಲಿ ಇಂ ಎಂಬ ತೃತೀಯಾ ವಿಭಕ್ತಿ ರೂಪ. ಇಂ ಎಂಬುದಲ್ಲದೆ ಇಂದಂ, ಇಂದೆ ಎಂಬ ಮೂರು ರೂಪದಲ್ಲಿ ಇವು ಪ್ರಯೋಗವಾಗುವುದಾಗಿ ಕೇಶಿರಾಜ ಹೇಳಿರುತ್ತಾನೆ. ನಡುಗನ್ನಡದಲ್ಲಿಯೂ ಇದೇ ರೂಪಗಳಿವೆ. ಹೊಸಗನ್ನಡದಲ್ಲಿ ಇಂದ ರೂಪವಿದೆ.

ಕೊಡಲಿಯಿಂ ಕಡಿದಂ, ಕೊಡಲಿಯಿಂದಂ ಕಡಿದಂ
ಕೊಡಲಿಯಿಂದೆ ಕಡಿದಂ

ಇದೇ ಪದವನ್ನು ಹೊಸಗನ್ನಡದಲ್ಲಿ ಪ್ರಯೋಗಿಸುವುದಾದಲ್ಲಿ **ಕೊಡಲಿಯಿಂದ ಕಡಿದನು** ಎಂಬ ರೂಪ ಸಿದ್ಧಗೊಳ್ಳುತ್ತದೆ.

**4. ಚತುರ್ಥೀ ವಿಭಕ್ತಿ ಪ್ರತ್ಯಯ ( ಕೆ > ಗೆ )**

ಚತುರ್ಥಿ ವಿಭಕ್ತಿ ಪ್ರತ್ಯಯದಲ್ಲಿ ಬದಲಾವಣೆ ಕಂಡು ಬರುವುದಿಲ್ಲ ಹಿಂದಿನಿಂದಲೂ ಕೆ,ಗೆ, ಇಗೆ ಎಂಬ ಪ್ರತ್ಯಯಗಳು ಬಳಕೆಯಾಗುತ್ತ ಬಂದಿವೆ.

ಮರಕ್ಕೆ ಎಱೆ ನೀರಂ (ಹಳಗನ್ನಡ)
ಮರಕ್ಕೆ ನೀರನ್ನು ಎರೆ (ಹೊಸಗನ್ನಡ)

**5. ಪಂಚಮೀ ವಿಭಕ್ತಿ ಪ್ರತ್ಯಯ ( ಅತ್ / ಅತ್ತಣಿಂ > ದೆಸೆಯಿಂದ )**

ಅತ್ / ಅತ್ತಣಿಂ ಎಂಬುದು ಪಂಚಮೀ ವಿಭಕ್ತಿ ಪ್ರತ್ಯಯ ಮರದತ್ತಣಿಂ ಪಣ್ಣುದಿರ್ದುದು ಎಂಬ ಉದಾಹರಣೆಯನ್ನು ಕೇಶಿರಾಜ ನೀಡಿದ್ದಾನೆ. ಉದ್ಯೋಗದತ್ತಣಿಂ ಸಿರಿ ಬಂದುದು ಎಂಬ ಪ್ರಯೋಗವನ್ನು ನೀಡಬಹುದು.

ದೆಸೆಯಿಂದ ಎಂಬುದು ಹೊಸಗನ್ನಡ ಪಂಚಮೀ ವಿಭಕ್ತಿ ರೂಪ. ಉದ್ಯೋಗದ ದೆಸೆಯಿಂದ ಸಿರಿ ಬಂದುದು ಎಂಬ ಪ್ರಯೋಗವನ್ನು ನೋಡಬಹುದು.

ಪಂಚಮೀ ವಿಭಕ್ತಿ ಪ್ರತ್ಯಯ ಅತ್ತಣಿಂ ಎಂಬುದನ್ನೂ ತೃತೀಯಾ ವಿಭಕ್ತಿಯ ಮೂರು ರೀತಿಗಳೊಡನೆ ಪ್ರಯೋಗಿಸುವ ವಿಚಾರವನ್ನು ಕೇಶಿರಾಜ ಹೇಳಿದ್ದಾನೆ. ಅತ್ತಣಿಂ, ಅತ್ತಣಿಂದಂ, ಅತ್ತಣಿಂದೆ ಎಂಬ ಪ್ರಯೋಗವನ್ನು ಗಮನಿಸಬಹುದು. ಕೆಲವೆಡೆಗಳಲ್ಲಿ ಅತ್ತಣ ಎಂಬ ರೂಪ ಬಿದ್ದು ಹೋಗಿ ಪಂಚಮೀ ಅರ್ಥದಲ್ಲಿ ಇಂ, ಇಂದಂ, ಇಂದೆ ಪ್ರತ್ಯಯಗಳು ಪ್ರಯೋಗಗೊಂಡಿವೆ.

ಪಂಚಮೀ ಅರ್ಥದಲ್ಲಿ ತೃತೀಯಾ ವಿಭಕ್ತಿ ಪ್ರತ್ಯಯಗಳು ಬಳಕೆಯಾಗುತ್ತಿವೆ ಎಂದರೂ ಅವೆರಡಕ್ಕೂ ಅರ್ಥವ್ಯತ್ಯಾಸವೇ ಇಲ್ಲವೆಂದಲ್ಲ. ಅಥವಾ ಪಂಚಮೀ ವಿಭಕ್ತಿ ಪ್ರತ್ಯಯದ ಅಗತ್ಯವೇ ಇಲ್ಲವೆಂದಲ್ಲ. ಈ ಮೊದಲೇ ನೀಡಿದ 'ಉದ್ಯೋಗದ ದೆಸೆಯಿಂದ ಸಿರಿ ಬಂದುದು' ಎಂಬ ಉದಾಹರಣೆ ಹಾಗೆಯೇ, 'ಉದ್ಯೋಗದಿಂದ ಸಿರಿ ಬಂದುದು' ಎಂಬ ವಾಕ್ಯರೂಪಗಳನ್ನು ಗಮನಿಸಿದರೆ, ಸಿರಿಯು ಉದ್ಯೋಗದಿಂದ ಬಂದಿತು ಎಂಬುದಕ್ಕಿಂತ ಉದ್ಯೋಗದ ದೆಸೆಯಿಂದ ಬಂದಿತು ಎಂಬುದು ಹೆಚ್ಚು ಅರ್ಥವತ್ತಾದ ಪ್ರಯೋಗವೆನಿಸುತ್ತದೆ. ಆದರೆ ಉದ್ಯೋಗದ ದೆಸೆಯಿಂದ ಎಂಬ ಪ್ರಯೋಗ ಅನಿವಾರ್ಯವೇನಲ್ಲ ಅದೇ ಅರ್ಥವನ್ನು ಉದ್ಯೋಗದಿಂದ ಎಂಬ ಪ್ರಯೋಗದಿಂದಲೂ ಪಡೆಯಬಹುದು.

ಪಂಚಮೀಗೆ ಬದಲು ತೃತೀಯೆಯ ಪ್ರಯೋಗ ಸೌಲಭ್ಯದ ಕಾರಣಕ್ಕಾಗಿ ಬಂದುದು ಎಂದೆನಿಸುತ್ತದೆ. ಪಂಚಮೀಯ ಪ್ರತ್ಯಯ ಇವರೂ ಅನುಕೂಲಕ್ಕಾಗಿ ತೃತೀಯೆಯನ್ನೇ ಬಳಸುತ್ತಾರೆ ಎಂದು ಹೇಳಬಹುದು. ಆಧುನಿಕ ಭಾಷಾ ವಿಜ್ಞಾನಿಗಳು ಕೂಡ ಕನ್ನಡಕ್ಕೆ ಪಂಚಮೀ ವಿಭಕ್ತಿಗೆ ಪ್ರತ್ಯೇಕ ಪ್ರತ್ಯಯದ ಅಗತ್ಯವಿಲ್ಲವೆಂದು ಪ್ರತಿಪಾದಿಸುತ್ತಾರೆ.

### 6. ಷಷ್ಠೀ ವಿಭಕ್ತಿ ಪ್ರತ್ಯಯ ( ಅದ್ > ಅ )

ಅದ್ ಎಂಬುದು ಹಳಗನ್ನಡದ ಷಷ್ಠೀ ವಿಭಕ್ತಿ ಪ್ರತ್ಯಯ ರೂಪ. **ಮರದದು ಪಣ್** ಎಂಬ ಉದಾಹರಣೆಯನ್ನು ಗಮನಿಸಿ. ಅದು ಎಂಬ ರೂಪ ಬಳಕೆಯ ಸಂದರ್ಭದಲ್ಲಿ ಸವೆದು ಅ ಎಂದಾಗಿರಬೇಕು. ಹಳಗನ್ನಡದಲ್ಲಿ ಅ ಮತ್ತು ಅದರ ದೀರ್ಘೀಕರಣ ಆ ರೂಪ ಎರಡೂ ಪ್ರಯೋಗದಲ್ಲಿದ್ದವು.

ಊರೊಡೆಯಂ ಎಂಬಲ್ಲಿ ಊರ (ಊರಿನ) ಒಡೆಯ ಎಂಬ ಎರಡೂ ಶಬ್ದಗಳನ್ನು ಗಮನಿಸಿ. ಊರು + ಅ = ಊರ, ಊರು + (ನ್) + ಅ = ಊರಿನ ಎಂಬಂತೆ ಪ್ರಯೋಗಿಸಬಹುದು.

ಕಾಲಾಗ್ನಿರುದ್ರನೆನಿಸಿದುದು ತೋಳಬಾಳ್ ತೈಲಪನಾ ಎಂಬ ಪ್ರಯೋಗದಲ್ಲಿ ಷಷ್ಠೀ ವಿಭಕ್ತಿ ಪ್ರತ್ಯಯ ಅ ವು ಆ ರೂಪದಲ್ಲಿದೆ.

ಮನೆಯ ಅಂಗಳ, ರಾಮನ ಗೆಲುವು ಎಂಬ ಹೊಸಗನ್ನಡ ಪ್ರಯೋಗಗಳನ್ನು ಷಷ್ಠೀ ವಿಭಕ್ತಿ ಪ್ರತ್ಯಯಕ್ಕೆ ಉದಾಹರಣೆಯಾಗಿ ಗಮನಿಸಬಹುದು.

### 7. ಸಪ್ತಮೀ ವಿಭಕ್ತಿ ಪ್ರತ್ಯಯ ( ಒಳ್ > ಅಲ್ಲಿ )

ಒಳ್, ಒಳಗೆ, ಅಲ್ಲಿ ಎಂಬ ಪ್ರತ್ಯಯಗಳು ಹಳಗನ್ನಡದಲ್ಲಿ ಕಾಣಿಸಿಕೊಳ್ಳುತ್ತವೆ. ನಡುಗನ್ನಡದಲ್ಲಿ ಒಳ್, ಒಳು, ಒಳಗೆ, ಬಳಕೆ ಇದೆ. ಹೊಸಗನ್ನಡದಲ್ಲಿ ಒಳಗೆ, ಅಲ್ಲಿ ಎಂಬ ರೂಪಗಳ ಪ್ರಾಚೀನ ಶಾಸನಗಳಲ್ಲಿ ಒಳ್ ಗೆ ಬದಲಾಗಿ ಉಳ್ ಎಂಬ ರೂಪವು ಪ್ರಯೋಗಗೊಂಡ ಉದಾಹರಣೆಗಳು ದೊರೆಯುತ್ತವೆ.

ಉದಾ : ವೆಟ್ಟದುಳ್

**8. ಸಂಬೋಧನಾ ವಿಭಕ್ತಿ ಪ್ರತ್ಯಯ ( ಅ, ಏ, ಇರಾ, ಈ > ಆ, ಏ, ಇರಾ, ಈ )**

ಏಳು ವಿಭಕ್ತಿ ಮತ್ತು ವಿಭಕ್ತಿ ಪ್ರತ್ಯಯಗಳಲ್ಲದೆ ಸಂಬೋಧನಾ ವಿಭಕ್ತಿ ಪ್ರತ್ಯಯವೆಂದು ಎಂಟನೆಯ ವಿಭಕ್ತಿ ಮತ್ತು ಪ್ರತ್ಯಯವನ್ನು ಹೇಳಲಾಗುತ್ತದೆ. ಆದರೆ ಇದನ್ನು ಎಂಟನೆಯ ವಿಭಕ್ತಿಯೆಂದು ಪ್ರತ್ಯೇಕವಾಗಿ ಹೇಳುವ ಅಗತ್ಯವಿಲ್ಲ. ಪ್ರಥಮೆಯಲ್ಲಿಯೇ ಸೇರಿಸಬಹುದೆಂಬುದು ಕೆಲವರ ಅಭಿಮತ. ಕೇಶಿರಾಜ ಕೂಡ **ವಿಭಕ್ತಿಗಳೇಳೆನಿಕ್ಕುಂ** ಎಂದು ಏಳೇ ವಿಭಕ್ತಿ ಪ್ರತ್ಯಯಗಳನ್ನು ಹೇಳಿರುವುದನ್ನು ಇಲ್ಲಿ ಗಮನಿಸಬಹುದು. ಈ ವಿಭಕ್ತಿಯು ಕಾರಕಾರ್ಥವಲ್ಲ. ಇರಾ ಎಂಬುದು ಬಹುವಚನದಲ್ಲಿ ಮಾತ್ರ ಬರುವ ಪ್ರತ್ಯಯ.

**ವಿಭಕ್ತಿ ಪಲ್ಲಟ**

ಒಂದು ವಿಭಕ್ತಿ ಪ್ರತ್ಯಯಕ್ಕೆ ಬದಲು ಇನ್ನೊಂದು ವಿಭಕ್ತಿ ಪ್ರತ್ಯಯ ಬಳಕೆಯಾಗುವುದನ್ನು ವಿಭಕ್ತಿ ಪಲ್ಲಟ ಎನ್ನುತ್ತೇವೆ. ಹೇಗೆ ಪಲ್ಲಟವಾದಾಗ ವಾಕ್ಯದ ಅರ್ಥಕ್ಕೆ ಯಾವುದೇ ಭಂಗ ಬರುವುದಿಲ್ಲ.

| | | |
|---|---|---|
| **ಉದಾ** | **ದ್ವಿತೀಯಾ**<br>ಅವನು ಊರನ್ನು ಸೇರಿದನು | **ಚತುರ್ಥೀ**<br>ಅವನು ಊರಿಗೆ ಸೇರಿದನು |
| | **ಪಂಚಮೀ**<br>ಅವನ ದೆಸೆಯಿಂದ ಒಳ್ಳಿತಾಯಿತು | **ತೃತೀಯಾ**<br>ಅವನಿಂದ ಒಳ್ಳಿತಾಯಿತು |
| | **ಷಷ್ಠೀ**<br>ಅವನು ಗುಣಗಳ ನಲ್ಲ | **ಚತುರ್ಥೀ**<br>ಅವನು ಗುಣಕ್ಕೆ ನಲ್ಲ |
| | **ಸಪ್ತಮೀ**<br>ನದಿಯು ಸಮುದ್ರದಲ್ಲಿ ಸೇರಿತು | **ಚತುರ್ಥೀ**<br>ನದಿಯು ಸಮುದ್ರಕ್ಕೆ ಸೇರಿತು |
| | **ಸಪ್ತಮೀ**<br>ನದಿಯು ಸಮುದ್ರದಲ್ಲಿ ಸೇರಿತು | **ದ್ವಿತೀಯಾ**<br>ನದಿಯು ಸಮುದ್ರವನ್ನು ಸೇರಿತು |
| | **ತೃತೀಯ**<br>ಕೊಡಲಿಯಿಂದ ಕಡಿದನು | **ಸಪ್ತಮೀ**<br>ಕೊಡಲಿಯಲ್ಲಿ ಕಡಿದನು |

ಸೂಚನೆ : ವಿಭಕ್ತಿ, ವಿಭಕ್ತಿ ಪ್ರತ್ಯಯ, ಅವುಗಳ ಪ್ರಯೋಗಗಳು ಇರುವ ಪಟ್ಟಿಯನ್ನು ನೀವು ಸಿದ್ಧಪಡಿಸಿ.

## 3.7. ಸರ್ವನಾಮಗಳು

ನಾಮಪದಗಳಿಗೆ ಬದಲಾಗಿ ಪ್ರಯೋಗಿಸುವ ಪದಗಳೇ ಸರ್ವನಾಮಗಳು.

ರಾಮನು ಕಾಡಿಗೆ ಹೋದನು ಅವನ ಸಂಗಡ ಸೀತೆ ಮತ್ತು ಲಕ್ಷ್ಮಣರೂ ಹೋದರು.

ಈ ವಾಕ್ಯದಲ್ಲಿ ಪ್ರಯೋಗವಾಗಿರುವ ಅವನ ಎಂಬುದು ಸರ್ವನಾಮ ರಾಮ ಎಂಬ ನಾಮಪದಕ್ಕೆ ಬದಲಾಗಿ ಅವನ ಎಂಬ ಪದವನ್ನು ಬಳಸಲಾಗಿದೆ.

ಸರ್ವನಾಮಗಳು ಒಂದು ಭಾಷೆಯ ಮೂಲ ಸ್ವರೂಪ ತಿಳಿಯಲು ಮುಖ್ಯ ಆಧಾರಗಳಲ್ಲಿ ಒಂದಾಗಿವೆ. ಅನ್ಯಭಾಷೆಯಿಂದ ಅನೇಕ ಪದಗಳು ಸ್ವೀಕೃತವಾದರೂ ಸಾಮಾನ್ಯವಾಗಿ ಸರ್ವನಾಮಗಳು ಸ್ವೀಕೃತವಾಗುವುದಿಲ್ಲ.

ಸರ್ವನಾಮಗಳನ್ನು ಪುರುಷಾರ್ಥಕ ಸರ್ವನಾಮಗಳು, ಪ್ರಶ್ನಾರ್ಥಕ ಸರ್ವನಾಮಗಳು ಮತ್ತು ಆತ್ಮಾರ್ಥಕ ಸರ್ವನಾಮಗಳು ಎಂದು ಮುಖ್ಯವಾಗಿ ಮೂರು ಗುಂಪುಗಳನ್ನಾಗಿ ವಿಂಗಡಿಸಲಾಗುತ್ತದೆ.

ಕೇಶಿರಾಜನು **ಅದು, ಇದು, ಉದು, ಆವುದು, ಎಲ್ಲದು, ಪೆಱತು, ಏನ್, ಪೆಱದು** ಎಂದು ಎಂಟು ಸರ್ವನಾಮಗಳನ್ನು ಹೇಳಿದ್ದಾನೆ.

**ಉತ್ತಮ ಪುರುಷ ಸರ್ವನಾಮಗಳು**

**ಆನ್ ಆಮ್ ನಾನ್ ನಾಮ್ ನಾನ್, ನಾಮ್** ರೂಪದಲ್ಲಿ ಕಾಣಿಸುತ್ತದೆ. ಹೊಸಗನ್ನಡದಲ್ಲಿ ನಾನು ಎಂಬ ರೂದಲ್ಲಿ ಪ್ರಯೋಗಗೊಳ್ಳುತ್ತಿದೆ. ನಾನು ಎಂಬುದು ಕೆಲವೊಮ್ಮೆ ನಾ ಎಂಬ ರೂಪದಲ್ಲೂ ಪ್ರಯೋಗವಾಗುವುದುಂಟು.

**ಮಧ್ಯಮ ಪುರುಷ ಸರ್ವನಾಮಗಳು**

**ನೀನ್ ನೀವ್** ಎಂಬುದು ಮಧ್ಯಮ ಪುರುಷ ಸರ್ವನಾಮ ಹಳಗನ್ನಡದಲ್ಲಿ. ನಡುಗನ್ನಡದಲ್ಲಿ ನೀನು ನೀವು ಎಂದು ಪ್ರಯೋಗಗೊಂಡಿವೆ. ಇಂದು ನೀನು ಜೊತೆಗೆ / ಬದಲಿಗೆ ನೀ ಎಂಬ ರೂಪವೂ ಬಳಕೆಯಲ್ಲಿದೆ.

**ಪ್ರಥಮ ಪುರುಷ ಸರ್ವನಾಮಗಳು**

**ತಾನ್ ತಾವ್** ಎಂಬುದು ಹಳಗನ್ನಡರೂಪ. ನಡುಗನ್ನಡದಲ್ಲಿ ಇವು **ತಾನು ತಾವು** ಎಂಬುದಾಗಿ ಬಳಕೆಗೊಂಡಿವೆ. ತಾನು ಎಂಬುದು ತಾ ಎಂಬ ರೂಪದಲ್ಲಿ ಕೆಲವೆಡೆ ಬಳಕೆಯಾಗಿದೆ.

**ಪ್ರಶ್ನಾರ್ಥಕ ಸರ್ವನಾಮಗಳು**

ಹಳಗನ್ನಡದಲ್ಲಿ ಆವನ್, ಆವಳ್, ಆರ್, ಎಂಬ ರೂಪಗಳಿದ್ದುದಾಗಿ ತಿಳಿಯುತ್ತದೆ. ಹೊಸಗನ್ನಡಕ್ಕೆ ಬರುವ ಹೊತ್ತಿಗೆ ಆದಿ ಅಕ್ಷರ ಯ ಕಾರವಾಗಿ ಪ್ರಯೋಗವಾಗಿದೆ.

ಉದಾ: - ಯಾವನು, ಯಾವಳು, ಯಾರು

**ಆತ್ಮಾರ್ಥಕ ಸರ್ವನಾಮಗಳು**

ತಾನು, ತಾವು ಇವು ಆತ್ಮಾರ್ಥಕ ಸರ್ವನಾಮಗಳು

## 3.8. ಕ್ರಿಯಾಪದ

ಕ್ರಿಯೆಯನ್ನು ಸೂಚಿಸುವ ಪದಗಳು ಕ್ರಿಯಾಪದಗಳು. ಕ್ರಿಯಾಪದಗಳ ಮೂಲ ರೂಪವನ್ನು ಧಾತು ಎಂದು ಕರೆಯಲಾಗುತ್ತದೆ. ಕ್ರಿಯಾ ಪ್ರಕೃತಿ ಎಂತಲೂ ಧಾತುವಿಗೆ ಹೆಸರಿದೆ.

ಮಾಡು: ಮಾಡುತ್ತಾನೆ, ಮಾಡುತ್ತಾಳೆ
ಮಾಡುವರು
ಮಾಡಲಿ, ಮಾಡನು, ಮಾಡಾನು

ಈ ಉದಾಹರಣೆಗಳನ್ನು ಗಮನಿಸಿ. ಇಲ್ಲಿ ಮಾಡು ಎಂಬುದು ಮೂಲ ಧಾತು. ಧಾತುವಿಗೆ ಪ್ರತ್ಯಯಗಳು ಸೇರಿ ಪದಗಳಾಗುತ್ತವೆ ಮತ್ತು ವಾಕ್ಯದಲ್ಲಿ ಪ್ರಯೋಗಗೊಳ್ಳುತ್ತವೆ.

ರಾಮನು ಮರವನ್ನು ಕಡಿದನು

ಮೇಲಿನ ವಾಕ್ಯದಲ್ಲಿ ರಾಮನು ಎಂಬುದು ಕರ್ತೃ ಪದ, ಮರವನ್ನು ಎಂಬುದು ಕರ್ಮಪದ, ಕಡಿದನು ಎಂಬುದು ಕ್ರಿಯಾಪದ.

ಧಾತು / ಕ್ರಿಯಾ ಪ್ರಕೃತಿಗೆ ಸೇರುವ ಪ್ರತ್ಯಯಗಳನ್ನು **ಆಖ್ಯಾತ ಪ್ರತ್ಯಯ** ಗಳು ಎನ್ನುತ್ತಾರೆ. **ಅಮ್, ಅರ್, ಅಯ್, ಎನ್, ಎವು** ಹಳಗನ್ನಡದ ಪ್ರತ್ಯಯಗಳು.

ಆಧುನಿಕ ಭಾಷಾ ವಿಜ್ಞಾನಿಗಳು ಕನ್ನಡಕ್ಕೆ ಕ್ರಿಯಾಪದದ ಅಗತ್ಯವಿಲ್ಲ ಎಂದು ಹೇಳುತ್ತಾರೆ. ಇದರ ಅರ್ಥ ಕ್ರಿಯಾಪದದ ಮೂಲ ರೂಪವಾದ ಧಾತುವಿಗೆ ಸೇರುವ ಆಖ್ಯಾತ ಪ್ರತ್ಯಯಗಳು ಸರ್ವನಾಮಗಳಾಗಿವೆ. ಅಲ್ಲದೆ ಈ ಪ್ರತ್ಯಯಗಳು ಕ್ರಿಯಾಪದಗಳಿಗಲ್ಲದೆ ಗುಣವಾಚಕ, ಸರ್ವನಾಮ, ಸಂಖ್ಯಾವಾಚಕಗಳಿಗೂ ಸೇರುತ್ತವೆ. ಇದರಿಂದ ವಾಕ್ಯದಲ್ಲಿ ಎರಡು ನಾಮಪದಗಳೇ ಕಾರ್ಯನಿರ್ವಹಿಸಿದಂತಾಗುತ್ತದೆ. ಆದ್ದರಿಂದ ಸರ್ವನಾಮದಿಂದ ಕೂಡಿದ ಗುಣವಾಚಕವೇ ಕ್ರಿಯಾಪದವಾಗುತ್ತದೆ ಎನ್ನುತ್ತಾರೆ.

ಈ ಉದಾಹರಣೆ ಗಮನಿಸಿ ನೀನ್ ಬೆಡಂಗನಯ್

ಇಲ್ಲಿ ನೀನ್ ಎಂಬುದು ಸರ್ವನಾಮವಾದರೆ, ಬೆಡಂಗ ಎಂಬುದು ಗುಣವಾಚಕ, ಅಯ್ ಎಂಬ ಆಖ್ಯಾತ ಪ್ರತ್ಯಯ ಗುಣವಾಚಕಕ್ಕೆ ಹತ್ತಿದೆ.

ಇದು ಮನೆ, ಅದು ದೇವಾಲಯ

ಈ ವಾಕ್ಯಗಳಲ್ಲಿ ಇದು ಮನೆಯಾಗಿದೆ, ಅದು ದೇವಾಲಯವಾಗಿದೆ ಎಂಬ ಪ್ರಯೋಗದ ಅಗತ್ಯವಿಲ್ಲ. ಇಲ್ಲೆಲ್ಲ ಪ್ರತ್ಯೇಕ ಕ್ರಿಯಾಪದವಿಲ್ಲ.

ಆದರೂ ಕ್ರಿಯಾಪದ ಧಾತುರೂಪವನ್ನು ಬಳಸುವ ಸಂದರ್ಭಗಳು ಇದ್ದೇ ಇವೆ. ವಿಧಿರೂಪದಲ್ಲಿ ಇವುಗಳನ್ನು ಬಳಸಲೇ ಬೇಕಾಗುತ್ತದೆ.

ಪಾಡು ಎಲೆ ಕೋಗಿಲೆ, ಪೋಗು ಅಮರಾವತಿಗೆ ಎಂಬ ಪ್ರಯೋಗಗಳನ್ನು ನೋಡಿ. ಇಲ್ಲಿ ಕ್ರಿಯಾಪದಗಳ ಬಳಕೆ ಸ್ಪಷ್ಟವಾಗಿ ಆಗಿಯೇ ಆಗುತ್ತದೆ.

ಧಾತುಗಳಲ್ಲಿಯೇ ಎರಡು ಬಗೆಗಳನ್ನು ಹೇಳುತ್ತಾರೆ.

1. ಸಹಜ ಧಾತು
2. ಸಾಧಿತ ಧಾತು.

**ಸಹಜ ಧಾತುಗಳು** ಮಾಡು, ತಿನ್ನು, ನಡೆ, ಎಳೆ.

**ಸಾಧಿತಧಾತುಗಳು** ಕೆಲವು ನಾಮ ಪ್ರಕೃತಿಗಳ ಅನುಕರಣ ಶಬ್ದಗಳ ಮುಂದೆ ಇಸು ಪ್ರತ್ಯಯ ಸೇರಿಸಿ ಕ್ರಿಯಾ ಪದಗಳನ್ನಾಗಿ ಮಾಡಿಕೊಂಡಂಥ ಶಬ್ದಗಳು

ಉದಾ: ಕನ್ನಡ + ಇಸು = ಕನ್ನಡಿಸು
ಭೋಗ + ಇಸು = ಭೋಗಿಸು

ಘಮಘಮ + ಇಸು = ಘಮಘಮಿಸು
ಥಳಥಳ + ಇಸು = ಥಳಥಳಿಸು

ವಾಕ್ಯದಲ್ಲಿ ಕರ್ತೃ ಕರ್ಮ ಮತ್ತು ಕ್ರಿಯಾಪದಗಳು ಸಾಮಾನ್ಯವಾಗಿ ಇರುತ್ತವೆಯಾದರೂ ಕರ್ತೃವಿನ ಕ್ರಿಯೆಯನ್ನು ಧಾತುವು ಕೆಲವು ವೇಳೆ ಕರ್ಮಪದ ವಿಲ್ಲದೆಯೇ ಪೂರ್ಣಗೊಳಿಸುವುದುಂಟು, ಮತ್ತೆ ಕೆಲವು ವೇಳೆ ಕರ್ಮಪದದ ಸಾಹಚರ್ಯದಿಂದ ಮಾತ್ರವೇ ಅರ್ಥ ಪೂರ್ಣಗೊಳ್ಳುವುದುಂಟು.

ಕರ್ಮವನ್ನು ಅಪೇಕ್ಷಿಸುವ ಧಾತುಗಳಿಗೆ ಸಕರ್ಮಕ ಧಾತುಗಳೆಂದು, ಕರ್ಮಪದದ ಅಪೇಕ್ಷೆ ಇಲ್ಲದ ಧಾತುಗಳಿಗೆ ಅಕರ್ಮಕ ಧಾತು ಎಂದು ಕರೆಯಲಾಗುತ್ತದೆ.

| | |
|---|---|
| **ಸಕರ್ಮಕ** | ಹರಿಶ್ಚಂದ್ರನು ಸತ್ಯವನ್ನು ಹೇಳಿದನು. |
| **ಅಕರ್ಮಕ** | ಸೂರ್ಯನು ಹುಟ್ಟಿದನು |

**ಕಾಲವಾಚಕಗಳು**

ಭೂತ ವರ್ತಮಾನ ಭವಿಷ್ಯತ್ ಎಂದು ಮೂರು ಕಾಲಗಳನ್ನು ಹೇಳಲಾಗಿದೆ. ದ ಭೂತಕಾಲ, ದಪ ವರ್ತಮಾನ ಕಾಲ, ವ ಭವಿಷ್ಯತ್‌ಕಾಲ ಸೂಚಕ ಪ್ರತ್ಯಯಗಳು. ಕನ್ನಡದಲ್ಲಿ ಕ್ರಿಯಾಪದಗಳಿಗೆ ಕಾಲವಾಚಕ ಪ್ರತ್ಯಯಗಳನ್ನು ಹತ್ತಿಸುವುದರಿಂದ ಕಾಲವು ಸೂಚಿಸಲಾಗುತ್ತದೆ.

| | | | | | | | |
|---|---|---|---|---|---|---|---|
| | | | ಅಖ್ಯಾತ ಪ್ರತ್ಯಯ | | | | |
| **ಭೂತಕಾಲ** | ನಡೆ | + | ದ | + | ಅನ್ | = | ನಡೆದನ್ |
| | ನಡೆ | + | ದ | + | ಅಯ್ | = | ನಡೆದಯ್ |
| | ನಡೆ | + | ದ | + | ಎನ್ | = | ನಡೆದೆನ್ |
| **ವರ್ತಮಾನ** | ಬರೆ | + | ದಪ | + | ಅನ್ | = | ಬರೆದಪನ್ |
| | ಬರೆ | + | ದಪ | + | ಅಯ್ | = | ಬರೆದಪಯ್ |
| | ಬರೆ | + | ದಪ | + | ಎನ್ | = | ಬರೆದಪೆನ್ |
| **ಭವಿಷ್ಯತ್** | ಪಡೆ | + | ವ | + | ಅನ್ | = | ಪಡೆವನ್ |
| | ಪಡೆ | + | ವ | + | ಅಯ್ | = | ಪಡೆವಯ್ |
| | ಪಡೆ | + | ವ | + | ಎನ್ | = | ಪಡೆವೆನ್ |

ಉ ಕಾರಾಂತ ಧಾತುಗಳು ಬಂದಾಗ ಭೂತಕಾಲ ಪ್ರಯೋಗದಲ್ಲಿ ಇ ಕಾರ ಆಗಮವಾಗುತ್ತದೆ. ಭವಿಷ್ಯತ್ತಿನಲ್ಲಿ ಇ ಕಾರಾಗಮ ಆಗುವುದಿಲ್ಲ.

| | | | | | | | | | |
|---|---|---|---|---|---|---|---|---|---|
| **ಭೂತಕಾಲ** | ತೂಗು | + | ಇ | + | ದ | + | ಅನ್ | = | ತೂಗಿದನ್ |
| | ತೂಗು | + | ಇ | + | ದ | + | ಅಯ್ | = | ತೂಗಿದಯ್ |
| | ತೂಗು | + | ಇ | + | ದ | + | ಎನ್ | = | ತೂಗಿದೆನ್ |
| **ಭವಿಷ್ಯತ್** | ತೂಗು | + | ವ | + | ಅನ್ | = | ತೂಗುವೆನ್ | | |
| | ತೂಗು | + | ವ | + | ಅಯ್ | = | ತೂಗುವಯ್ | | |
| | ತೂಗು | + | ವ | + | ಎನ್ | = | ತೂಗುವೆನ್ | | |

ಭಾಷಾ ವಿಜ್ಞಾನಿಗಳು ಮೂರು ಕಾಲಗಳಿಗೆ ಬದಲು ಎರಡೇ ಕಾಲಗಳನ್ನು ಹೇಳುತ್ತಾರೆ. ಅವರ ಪ್ರಕಾರ ಭೂತಕಾಲ ಮತ್ತು ಭವಿಷ್ಯದ್ವರ್ತಮಾನ ಕಾಲ ಎರಡೇ ಸಾಕು. ನಾಳೆ ಬಂದಪೆನ್ ಇದು ಭವಿಷ್ಯತ್ ಮತ್ತು ವರ್ತಮಾನ ಕಾಲ ಎರಡನ್ನು ಸೂಚಿಸುತ್ತದೆ. ಇಂದು ಬರುತ್ತೇನೆ ಎಂದ ಹಾಗೆಯೇ

ನಾಳೆ ಬರುತ್ತೇನೆ ಎಂಬ ಪ್ರಯೋಗವನ್ನೂ ನಾವು ಮಾಡುತ್ತೇವೆ. ವರ್ತಮಾನ ಕಾಲವು ಕೇವಲ ಸಂಚಾರಿ. ವರ್ತಮಾನ ಕಾಲವೆಂಬುದು ಸ್ಪಷ್ಟವಾಗಿ ಕಾಣದೊರೆಯುವುದಿಲ್ಲ. ಕ್ಷಣಾರ್ಧದಲ್ಲಿ ವರ್ತಮಾನ ಪ್ರಯೋಗ ಭೂತ ವಾಗುತ್ತದೆ.

**ನಿಷೇಧ ಕ್ರಿಯೆ**

ಕ್ರಿಯೆ ನಡೆಯದ ಸಂದರ್ಭ ಸೂಚಿಸುವುದು ನಿಷೇಧ ಕ್ರಿಯೆ. ಕ್ರಿಯೆಯು ನಡೆಯಲಿಲ್ಲವೆಂಬ ಅರ್ಥ ತೋರುವ ಧಾತುಗಳಿಗೆ ಕೆಲವು ಆಖ್ಯಾತ ಪ್ರತ್ಯಯಗಳು ಸೇರಿ ನಿಷೇಧಾರ್ಥಕ ಕ್ರಿಯಾಪದಗಳು ಸಿದ್ಧಗೊಳ್ಳುತ್ತವೆ.

ಹಳಗನ್ನಡದಲ್ಲಿ ನಿಷೇಧ ಕ್ರಿಯೆ ಎರಡು ಬಗೆಯಲ್ಲಿ ದೊರೆಯುತ್ತದೆ.

1. ಧಾತುವಿಗೆ ಅ ಅಥವಾ ಅದೆ ಪ್ರತ್ಯಯ ಸೇರುವ ಮೂಲಕ.

ಧಾತು

ಉದಾ: ನೋಡು + ಅ = ನೋಡ

ಕೇಳು + ಅ = ಕೇಳ

2. ಕ್ರಿಯಾಪದಕ್ಕೆ ಅಲ್ಲಂ, ಇಲ್ಲ ಇತ್ಯಾದಿ ಪ್ರತ್ಯಯಗಳು ಸೇರುವ ಮೂಲಕ

ಉದಾ: ನೋಡಿದನಲ್ಲಂ, ನೋಡಿದನಿಲ್ಲ.

ಅಲ್ತು ಪ್ರತ್ಯಯವು ಸೇರುವುದುಂಟು.

ಉದಾ ಕೇಳಿದುದಲ್ತು, ಬೇಡಿದುದಲ್ತು

ಹೊಸಗನ್ನಡದಲ್ಲಿ ಎರಡು ರೂಪಗಳೂ ಬಳಕೆಯಾಗುತ್ತವೆ. ಅಲ್ ಮತ್ತು ಇಲ್ಲ ಎಂಬ ಪ್ರತ್ಯಯಗಳು ಒಟ್ಟಿಗೆ ಸೇರಿ ನೋಡಲಿಲ್ಲ ಎಂಬ ಭೂತಕಾಲ ಸೂಚಕ ರೂಪ ಸಿದ್ಧಿಸುವುದುಂಟು. ಭವಿಷ್ಯತ್ ಕಾಲ ಸೂಚಕವಾಗಿ ಉದು ಮತ್ತು ಇಲ್ಲ ಸೇರುತ್ತವೆ.

ಉದಾ : ನೋಡುವುದಿಲ್ಲ

ಏಕವಚನದಲ್ಲಿ ಅನು, ಅಳು, ಅದು, ಎ, ಎನು ಎಂಬ ಆಖ್ಯಾತ ಪ್ರತ್ಯಯಗಳು ಬಹುವಚನದಲ್ಲಿ ಅದು, ಅವು, ಅರಿ, ಎವು ಎಂಬ ಆಖ್ಯಾತ ಪ್ರತ್ಯಯಗಳೂ ನಿಷೇಧಾರ್ಥದಲ್ಲಿ ಎಲ್ಲ ಧಾತುಗಳೊಂದಿಗೆ ಸೇರುತ್ತವೆ.

## 3.9. ಕರ್ಮಣಿ ಪ್ರಯೋಗ

ಕರ್ಮಣಿ ಪ್ರಯೋಗವೆಂಬುದು ವಾಕ್ಯಪ್ರಯೋಗದ ಒಂದು ಬಗೆ. ಮಕ್ಕಳು ಪುಸ್ತಕವನ್ನು ಓದಿದರು. ಎಂಬ ವಾಕ್ಯವನ್ನು ಪುಸ್ತಕವು ಮಕ್ಕಳಿಂದ ಓದಲ್ಪಟ್ಟಿತು ಎಂದು ಪ್ರಯೋಗಿಸಲಾಗುತ್ತದೆ. ಸಕರ್ಮಕ ಧಾತುಗಳ ಮೇಲೆ ಅಲ್ಪಡು ಪ್ರತ್ಯಯವು ಸೇರಿದ ಮೇಲೆ ಕಾಲಸೂಚಕ ಪ್ರತ್ಯಯವೂ,

ಆಖ್ಯಾತ ಪ್ರತ್ಯಯಗಳು ಸೇರಿ ಕರ್ಮಣಿ ಪ್ರಯೋಗಗಳಾಗುತ್ತವೆ. ಸಕರ್ಮಕ ಧಾತುಗಳ ಮೇಲೆ ಅಲ್ಪಡು ಪ್ರತ್ಯಯವು ಸೇರಿದ ಮೇಲೆ ಕಾಲಸೂಚಕ ಪ್ರತ್ಯಯವೂ, ಆಖ್ಯಾತ ಪ್ರತ್ಯಯಗಳು ಸೇರಿ ಕರ್ಮಣಿ ಪ್ರಯೋಗಗಳಾಗುತ್ತವೆ. ಈ ಬಗೆಯ ಪ್ರಯೋಗ ಹಳಗನ್ನಡದಲ್ಲಿಯೂ ಇದ್ದುದಕ್ಕೆ ತಿನೆಪಡು ಮೊದಲಾದ ಉದಾಹರಣೆಗಳು ದೊರೆಯುತ್ತವೆ. ಕರ್ಮಣಿ ಪ್ರಯೋಗವು ಕನ್ನಡದಲ್ಲಿ ವಿರಳವೆಂದೇ ಹೇಳಬೇಕು. ಇದು ಕನ್ನಡ ಭಾಷಾ ಜಾಯಮಾನಕ್ಕೆ ಅಷ್ಟಾಗಿ ಒಗ್ಗದ ಪ್ರಯೋಗವಾಗಿದೆ. ಅದಕ್ಕೆಂದೆ ಈ ಪ್ರಯೋಗ ಕನ್ನಡದಲ್ಲಿ ವಿರಳ.

## 3.10. ಗುಣವಾಚಕಗಳು

ವಸ್ತು ಅಥವಾ ವ್ಯಕ್ತಿಯ ಸ್ವಭಾವ ಲಕ್ಷಣವನ್ನು ತಿಳಿಸುವ ಶಬ್ದಗಳು ಗುಣವಾಚಕಗಳು. ಗುಣವಾಚಕವು ನಾಮಪದದಲ್ಲಿಯೇ ಸೇರುತ್ತದೆ. ಕನ್ನಡದಲ್ಲಿ ತು ಕಾರಾಂತ, ದು ಕಾರಾಂತ ಗುಣವಾಚಕಗಳನ್ನು ಗುರುತಿಸಲಾಗಿದೆ.

**ತು ಕಾರಾಂತ** ಒಳ್ಳಿತು, ಮೆಲ್ಲಿತು, ಬೆಟ್ಟಿತು, ತೆಳ್ಳಿತು.

**ದು ಕಾರಾಂತ** ಇನಿದು, ಕರಿದು, ಬಿಳಿದು, ಎಳೆಯದು

ಪ್ರಕೃತಿಗೆ ಅನೆ, ಅಗೆ ಮುಂತಾದ ಪ್ರತ್ಯಯಗಳು ಸೇರಿ ಕಮ್ಮನೆ, ಬೆಳ್ಳಗೆ ಮುಂತಾದ ರೂಪಗಳಿವೆ. ಇವುಗಳಿಗೆ ಇನ ಮತ್ತು ಯ ಇತ್ಯಾದಿಗಳು ಸೇರಿಯೂ ಪ್ರಯೋಗವಾಗುತ್ತವೆ.

ಬೆಳ್ಳಗಿನ, ನುಣ್ಣಗಿನ, ಬೆಳ್ಳನೆಯ, ನುಣ್ಣನೆಯ.

ಕನ್ನಡದಲ್ಲಿ ಉಳ್ಳ, ಇಲ್ಲದ ಎಂಬ ಶಬ್ದಗಳು ಪ್ರಕೃತಿಗಳೊಡನೆ ಸೇರಿ ಗುಣವಾಚಕಗಳಾಗುತ್ತವೆ.

ಪೊನ್ + ಉಳ್ಳ = ಪೊನ್ನುಳ್ಳ
ಅರಿವು + ಉಳ್ಳ = ಅರಿವುಳ್ಳ
ಓದು + ಇಲ್ಲದ = ಓದಿಲ್ಲದ
ದೊರೆ + ಇಲ್ಲದ = ದೊರೆಯಿಲ್ಲದ

ಇಂತಹ ರೂಪಗಳು ಹೊಸಗನ್ನಡದಲ್ಲಿ ರೂಢಿಯಲ್ಲಿವೆ. ಹಳಗನ್ನಡದಲ್ಲಿ ತು, ದು,ಕಾರಾಂತ ಶಬ್ದಗಳಿಗೆ ಅಪ್ಪ, ಅಪ ಎಂಬ ಶಬ್ದಗಳೂ ಸೇರುತ್ತಿದ್ದವು.

ಮೆಲ್ಲಿತು + ಅಪ್ಪ = ಮೆಲ್ಲಿತಪ್ಪ, ಮೆಲ್ಲಿತುವಪ್ಪ

ಹಳಗನ್ನಡದಲ್ಲಿ **ಅನಿತು, ಇನಿತು, ಎನಿತು** ಎಂಬುವು ಗುಣವಚನದ ಕಾರ್ಯವನ್ನು ನಿರ್ವಹಿಸುವ ಶಬ್ದರೂಪಗಳು. ಇವು ಹೊಸಗನ್ನಡದಲ್ಲಿಲ್ಲ. ಈ ಶಬ್ದಗಳು ನಡುಗನ್ನಡದಲ್ಲಿ **ಆಸು, ಈಸು** ಎಂಬ ರೂಪವನ್ನು ಧರಿಸಿವೆ. ಹೊಸಗನ್ನಡದಲ್ಲಿ **ಅಷ್ಟು, ಇಷ್ಟು** (ಅಟು, ಈಟು) ಎಂಬ ರೂಪದಲ್ಲಿ ಬಳಕೆಯಾಗುತ್ತಿವೆ.

## 3.11. ಸಂಖ್ಯಾವಾಚಕಗಳು

ಸಂಖ್ಯೆಗಳನ್ನು ಸೂಚಿಸುವ ಪದಗಳು ಸಂಖ್ಯಾವಾಚಕಗಳು. ಒಂದರಿಂದ **ಹತ್ತು** ಮತ್ತು ನೂರು ಎಂಬುದಾಗಿ ಸಂಖ್ಯೆಯನ್ನು ಸೂಚಿಸುವ ಒಟ್ಟು **ಹನ್ನೊಂದು** ಸಂಖ್ಯಾವಾಚಕಗಳು ಕನ್ನಡದಲ್ಲಿವೆ. ಉಳಿದವು ಸಮಸ್ತ ಪದಗಳು. ಸಾವಿರ ಎಂಬುದು ಸಹಸ್ರ ಪದದ ತದ್ಭವ ರೂಪ. ಲಕ್ಷ, ಕೋಟಿ ಇವೆಲ್ಲ ಸಂಸ್ಕೃತ ಪದಗಳು.

ಒಂಬತ್ತು ಎಂಬುದು ಸಂಯುಕ್ತ ಪದ. ಒನ್ + ಪತ್ತು = ಒಂಬತ್ತು ಎಂದಾಗಿದೆ. ಹತ್ತರಲ್ಲಿ ಒಂದು ಕಡಿಮೆ ಎಂಬ ಅರ್ಥದಲ್ಲಿ ಇದನ್ನು ಪರಿಗಣಿಸಬೇಕು. ವಾಸ್ತವವಾಗಿ ದ್ರಾವಿಡ ಭಾಷೆಗಳಲ್ಲಿ ಸಂಖ್ಯಾವಾಚಕಗಳು ಮೊದಲು ಮೂಲಧಾತು ಪ್ರಕೃತಿಗಳಾಗಿ ತೋರಿ ಆನಂತರ **ತು, ದು** ಗಳನ್ನು ಪಡೆದುಕೊಂಡಿರುವುದು ಕಾಣುತ್ತದೆ.

ಸಂಖ್ಯಾವಾಚಕಗಳಿಗೆ ಪ್ರತ್ಯಯಗಳು ಸೇರಿ ಪುರುಷ ವಾಚಕಗಳಾಗುತ್ತವೆ. ಹಳಗನ್ನಡದಲ್ಲಿ **ಒರ್ವನ್, ಒರ್ವಳ್** ಎಂಬ ರೂಪವೂ, ಹೊಸಗನ್ನಡದಲ್ಲಿ **ಒಬ್ಬನು, ಒಬ್ಬ**, ಒಬ್ಬಳು ಎಂಬ ರೂಪವೂ ಪ್ರಯೋಗದಲ್ಲಿದೆ.

ಕೆಲವರ್ (ಕೆಲವರು)   ಪಲಂಬರ್ / ಪಲರ್ (ಹಲವರು)
ಎಲ್ಲರ್ (ಎಲ್ಲರೂ)

ಎಂಬ ರೂಪಗಳೂ ಸಂಖ್ಯಾವಾಚಕಗಳಾಗಿ ಪ್ರಯೋಗಗೊಳ್ಳುತ್ತವೆ.

**ಅನೆಯ** ಪ್ರತ್ಯಯ ಹತ್ತಿದ ಪ್ರಯೋಗವುಂಟು. ಒಂದನೆಯ, ಎರಡನೆಯ ಮುಂತಾದುವನ್ನು ಉದಾಹರಣೆಯಾಗಿ ನೋಡಬಹುದು. **ಇಮ್ಮಡಿ, ಮುಮ್ಮಡಿ, ನಾಲ್ವಡಿ** ಎಂಬ ಶಬ್ದರೂಪಗಳ ಬಳಕೆಯಿದೆ.

ಸೊನ್ನೆಯನ್ನು ಕಂಡು ಹಿಡಿದವರು ಭಾರತೀಯರು ಎಂಬ ಅಭಿಪ್ರಾಯವಿದೆ. ಇದರ ಆವಿಷ್ಕಾರ ಸಂಖ್ಯಾಶಾಸ್ತ್ರದ ಮಹತ್ವದ ಸಾಧನೆ. ಸರ್ವನಾಮಗಳಂತೆ ಸಂಖ್ಯಾವಾಚಕಗಳೂ ಒಂದು ಭಾಷೆಯ ಮೂಲ ಸ್ವರೂಪ ತಿಳಿಯಲು ಸಹಕರಿಸುತ್ತವೆ ಎಂಬುದು ಗಮನಾರ್ಹ ಅಂಶ.

## 3.12. ಅವ್ಯಯಗಳು

ಅವ್ಯಯಗಳೆಂದರೆ ಯಾವ ಬದಲಾವಣೆಗೂ ಗುರಿಯಾಗದೆ ಯಥಾ ಸ್ಥಿತಿಯಲ್ಲಿ ಉಳಿದುಕೊಳ್ಳುವ ಶಬ್ದಗಳು. ಅವುಗಳಲ್ಲಿ ಕೆಲವು ಕ್ರಿಯಾವಿಶೇಷಣಗಳು ಮತ್ತೆ ಕೆಲವು ಸಂಬಂಧಸೂಚಕಗಳು ಇನ್ನು ಕೆಲವು ವಿಷಾದವನ್ನು, ಆಶ್ಚರ್ಯವನ್ನು ಸೂಚಿಸುವ ಶಬ್ದಗಳು.

ಇವುಗಳಲ್ಲಿ ಕೆಲವು ಸ್ವತಂತ್ರವಾದುವು. ಕೆಲವು ನಿಷ್ಪನ್ನವಾದುವು. ಹಳಗನ್ನಡದಲ್ಲಿದ್ದ ಎಷ್ಟೋ ಅವ್ಯಯಗಳು ಈಗ ಕಂಡುಬರುವುದಿಲ್ಲ. ನಡುಗನ್ನಡದಲ್ಲಿದ್ದ ಕೆಲವು ಅವ್ಯಯಗಳೂ ಕೂಡ ಈಗ ಇಲ್ಲವಾಗಿದೆ. ಹಳಗನ್ನಡದ ಆಗಡು, ಈಗಡು, ವಲಂ, ದಲ್, ಗಡ ಮತ್ತು ನಡುಗನ್ನಡದ ಆಗಳ್, ಈಗಳ್, ಅನ್ನೆಗಂ, ಮಿಗೆ, ತವೆ, ಉರೆ ಮುಂತಾದುವು ಈಗ ಪ್ರಯೋಗದಲ್ಲಿಲ್ಲ. ಕೆಲವನ್ನು ಹೊಸಗನ್ನಡದಲ್ಲಿಯೂ ಬಳಸಲಾಗುತ್ತಿದೆ. ಕೆಲವು ಅಲ್ಪಸ್ವಲ್ಪ ಮಾರ್ಪಾಡುಗಳಿಗೆ ಒಳಗಾಗಿ ಪ್ರಯೋಗವಾಗುತ್ತವೆ. ಹಳಗನ್ನಡದಲ್ಲಿ ಒಂದೇ ಮೂಲದಿಂದ ಹಲವು ಅಲ್ಪಸ್ವಲ್ಪ ಮಾರ್ಪಾಡುಗಳಿಗೆ ಒಳಗಾಗಿ ಪ್ರಯೋಗವಾಗುತ್ತವೆ. ಅವುಗಳಲ್ಲಿ ಕೆಲವು ಮಾಯವಾಗಿ ಕೆಲವು ಉಳಿದುಕೊಂಡಿವೆ. ಉದಾಹರಣೆಗೆ ಅನಂತರ ಎಂಬ ಅರ್ಥದಲ್ಲಿ ಬೞಿಕಂ, ಬೞಿಕ್ಕಂ, ಬಳಿಕ್ಕೆ, ಬಳಿಯಂ ಎಂಬುವು ನಡುಗನ್ನಡದಲ್ಲಿ ಕಂಡುಬರುತ್ತವೆ. ಬೞಿಕಂ ಎಂಬುದು ಈಗ ೞಳವನ್ನು ಕಳೆದುಕೊಂಡು ಕುಳವನ್ನು ಒಳಗೊಂಡು ಬಳಿಕ ಎಂಬ ರೂಪದಲ್ಲಿ ಪ್ರಯೋಗವಾಗುತ್ತಿದೆ.

ಮೇಣ್, ಮತ್ತಂ, ಮತ್ತೆ ಮತ್ತು ಎಂಬ ಶಬ್ದಗಳಲ್ಲಿ ಮೇಣ್, ಮತ್ತಂ ಎಂಬುವು ಬಿಟ್ಟು ಹೋಗಿ ಮತ್ತೆ, ಮತ್ತು ಎಂಬೆರಡು ಪ್ರಯೋಗಗಳು ಈಗ ಉಳಿದುಕೊಂಡಿವೆ.

ಕೆಲವು ಅವ್ಯಯಗಳು ಅಲ್ಪ ರೂಪ ವ್ಯತ್ಯಾಸವನ್ನು ಹೊಂದಿ ಬಳಕೆಯಲ್ಲಿರುವುದನ್ನು ನೋಡಬಹುದು.

ಇನ್ ಇನ್ನೂ ಉಂ ಊ ವರಂ, ವರೆಗಂ ವರೆಗೆ ಅಲ್ಲಿಯವರೆಗೆ, ಬಂಗಾಳದ ವರೆಗೆ, ಇದುವರೆಗೆ, ಕುತ್ತಿಗೆವರೆಗೆ

ಅನ್ನೆಗಂ ತನಕ ಇಲ್ಲೀತನಕ, ಹೋಗುವತನಕ, ಎಲ್ಲಿತನಕ
ಪೊಱಗಾಗಿ ಹೊರತು ಅವನ ಹೊರತು, ಅವಳ ಹೊರತು, ಅದರ ಹೊರತು
ಆಗಳುಂ ಯಾವಾಗಲೂ ಆದೊಡಂ ಆದರೂ, ಏನಾನುಂ ಏನಾದರೂ

ಕೆಲವು ಉಪಮೆಗಳ ಪ್ರಯೋಗ ಸಂದರ್ಭದಲ್ಲಿ ಹಳಗನ್ನಡದಲ್ಲಿ ಬರುತ್ತಿದ್ದ ಅವ್ಯಯಗಳು ವೋಲ್, ಅಂತಿರೆ ಚಂದ್ರನವೋಲ್, ಬೊಬ್ಬುಳಿಯಂತಿರೆ ಮುಂತಾದವು ಈಗ ಬಳಕೆಯಲ್ಲಿಲ್ಲ. ಈಗ ಹಾಗೆ, ಅಂತೆ ಎಂಬುವು ಬಳಕೆಯಲ್ಲಿವೆ. ಚಂದ್ರನ ಹಾಗೆ, ನೀರಗುಳ್ಳೆಯಂತೆ

ಸುಮ್ಮನೆ ಎಂಬುದು ಹಿಂದೆ ಇದ್ದಂತೆ ಈಗಲೂ ಉಳಿದಿದೆ. ನಿಷೇಧಾರ್ಥದ ಅಲ್ಲಂ, ಅಭಾವಾರ್ಥದ ಇಲ್ಲಂ ಎಂಬುವು ಅಲ್ಲ, ಇಲ್ಲ ಎಂಬಂತೆ ಪ್ರಯೋಗದಲ್ಲಿವೆ. ಎತ್ತಾನುಂ ಎಂಬುದು ಈಗ ಹೇಗಾದರೂ ಎಂಬಂತೆ ಬಳಕೆಯಲ್ಲಿದೆ. ಬೇಱೆ ಬೇಱೆ ಎನ್ನುವುದು ಶಕಟರೇಫವನ್ನು ಕಳೆದು ಕೊಂಡು ಬೇರೆ ಬೇರೆ ಎಂಬ ರೂಪದಲ್ಲಿ ಈಗ ಪ್ರಯೋಗವಾಗುತ್ತಿದೆ. ಅಯ್ಯೋ ಎಂಬ ಅವ್ಯಯವು ಹಿಂದಿನಿಂದಲೂ ಉಳಿದು ಬಂದಿದೆ. ಹಿಂದೆ ಅಃ, ಆಃ ಎಂಬ ಆಶ್ಚರ್ಯದ, ವಿಡಂಬನದ ಪ್ರಯೋಗಗಳು ಈಗ ಅಹ, ಆಹ ಎಂಬ ರೂಪವನ್ನು ತಳೆದಿವೆ. ಕಾಲವನ್ನು ಸೂಚಿಸುವ ಅಂದು, ಇಂದು ಎಂಬುವು ಈಗಲೂ ಉಳಿದುಕೊಂಡಿವೆ.

ಎಲ್ಲ ಕಾಲದಲ್ಲಿಯೂ ಸಲ್ಲುತ್ತಿರುವ ಅವ್ಯಯಗಳಲ್ಲಲಿ ಅತ್ತ, ಇತ್ತ, ಅಲ್ಲಿ, ಇಲ್ಲಿ ಎಂಬುವನ್ನು ನೋಡಬಹುದು. ಅತ್ತ ಪುಲಿ ಇತ್ತದರಿ ಎಂಬ ಗಾದೆ ಹಾಗೆಯೇ ಇಂದಿಗೂ ಇದೆ. ಸಂಸ್ಕೃತದಲ್ಲಿ ಕೆಲವು ಪಾದಪೂರಣ ಶಬ್ದಗಳು, ಅಕ್ಷರಗಳು ಅವ್ಯಯಗಳಂತೆ ಕೆಲಸ ಮಾಡುತ್ತಿದ್ದವು. ಚ, ವೈ, ತು, ಹಿ ಎಂಬುವುಗಳನ್ನು ಹೆಚ್ಚಾಗಿ ಬಳಸುವ ಕವಿಗಳನ್ನು ಚವೈತುಹಿ ಕವಿಗಳೆಂದು ಹಾಸ್ಯ ಮಾಡುತ್ತಿದ್ದರು. ಹಳಗನ್ನಡದಲ್ಲಿಯೂ ವಲಂ, ಗಡ, ಕೊಳೆ, ಮುಂತಾದ ಪಾದಪೂರಣ ಅವ್ಯಯಗಳಿದ್ದುವು. ಈಗಲೂ ಕೆಲವರು ಮಾತನಾಡುವಾಗ ಬರೆಯುವಾಗ ಪರಂತು, ವಿನಾ ಇತ್ಯಾದಿಗಳನ್ನು ಬಳಸುತ್ತಾರೆ. ಇತ್ತೀಚಿಗೆ ಮಾತಿನ ಮಧ್ಯೆ ಬಂದು ಎಂಬ ಶಬ್ದವನ್ನು ಸೇರಿಸುತ್ತಾರೆ. ಇದು ತಮಿಳಿನ ಪ್ರಭಾವದಿಂದ ಬಂದಿರಬಹುದು.

ಅವ್ಯಯಗಳು ಲಿಂಗ, ವಚನ, ವಿಭಕ್ತಿಗಳಿಗೆ ಬದಲಾವಣೆಯನ್ನು ತೋರುತ್ತಿರಲಿಲ್ಲವಾದ್ದರಿಂದಲೇ ಅವುಗಳನ್ನು ಅ ವ್ಯಯ ಎಂದು ಕರೆಯುತ್ತಿದ್ದರು.

## 3.13. ಸ್ವ ಪರೀಕ್ಷೆ ಪ್ರಶ್ನೆಗಳು

ಇಲ್ಲಿಯ ಪ್ರಶ್ನೆಗಳಿಗೆ ಉತ್ತರವನ್ನು ನಿಮ್ಮ ಸ್ವಪ್ರಯತ್ನದಿಂದ ಕಂಡುಕೊಳ್ಳುವುದು

1. ನಾಮಪ್ರಕೃತಿ ಎಂದರೇನು ?

..........................................................................................

..........................................................................................

2. ಕ್ರಿಯಾಪದದ ಮೂಲ ರೂಪವನ್ನು ಏನೆಂದು ಕರೆಯುತ್ತಾರೆ ?

..........................................................................................

..........................................................................................

3. ಕನ್ನಡ ಭಾಷೆಯಲ್ಲಿರುವ ಲಿಂಗಗಳು ಎಷ್ಟು ?

..............................................................................................................

..............................................................................................................

4. ದ್ರಾವಿಡ ಭಾಷೆಗಳ ಲಿಂಗವಿಂಗಡಣೆ ಯಾವುದನ್ನು ಅನುಸರಿಸಿರುತ್ತದೆ ?

..............................................................................................................

..............................................................................................................

5. ಕನ್ನಡದಲ್ಲಿ ವಚನಗಳು ಎಷ್ಟು ?

..............................................................................................................

..............................................................................................................

6. ದ್ವಿವಚನ ಎಂದರೇನು ?

..............................................................................................................

..............................................................................................................

7. ವಿಭಕ್ತಿ ಪ್ರತ್ಯಯಗಳು ಎಷ್ಟು ? ಯಾವುವು ?

..............................................................................................................

..............................................................................................................

8. ಕಾಲಸೂಚಕ ಪ್ರತ್ಯಯಗಳನ್ನು ತಿಳಿಸಿ.

..............................................................................................................

..............................................................................................................

9. ಗುಣವಾಚಕ ಎಂದರೇನು ಉದಾಹರಣೆ ಕೊಡಿ.

..............................................................................................................

..............................................................................................................

10. ಸಂಖ್ಯಾವಾಚಕಗಳು ಎಂದರೇನು ?

..............................................................................................................

..............................................................................................................

11. ಕರ್ಮಣಿ ಪ್ರಯೋಗಕ್ಕೆ ಒಂದು ಉದಾಹರಣೆ ಕೊಡಿ.

..............................................................................................................

..............................................................................................................

## 3.14. ಸಾರಾಂಶ

ಒಂದು ಭಾಷೆಯಲ್ಲಿ ಪ್ರಯೋಗಗೊಳ್ಳುವ ಧ್ವನಿಗಳನ್ನು ವರ್ಣಗಳ ಎಂದು ಕರೆಯುತ್ತೇವೆ. ಈ ವರ್ಣಗಳು ಸೇರಿ ವರ್ಣಮಾಲೆಯಾಗುತ್ತದೆ. ಈ ವರ್ಣಮಾಲೆಯನ್ನು ಕೇಶಿರಾಜ ಶುದ್ಧಗೆ ಎಂದು ಕರೆದಿದ್ದಾನೆ. ವರ್ಣ ಅಕ್ಷರಗಳು ಸೇರಿ ಪದಗಳಾಗಿಯೂ, ಪದಗಳು ಕೂಡಿ ವಾಕ್ಯಗಳಾಗಿಯೂ ಪ್ರಯೋಗಗೊಂಡು ಭಾಷೆ ಸಂವಹನ ಮಾಧ್ಯಮವಾಗಿ ಬಳಕೆಯಾಗುತ್ತದೆ.

ನಾಮಪದ, ಸರ್ವನಾಮ, ಲಿಂಗ, ವಚನ, ವಿಭಕ್ತಿ, ಕ್ರಿಯಾಪದ, ಗುಣವಾಚಕ, ಸಂಖ್ಯಾವಾಚಕ ಅವ್ಯಯ ಮೊದಲಾದವು ಒಂದು ಭಾಷೆಯಲ್ಲಿ ಬಳಕೆಯಲ್ಲಿರುವ ಅಂಗಗಳಾಗಿವೆ. ಇವೆಲ್ಲವುಗಳ ಒಂದು ಕ್ರಮವರಿತ ಪ್ರಯೋಗ ಭಾಷೆಯಲ್ಲಿ ಉದ್ದಿಷ್ಟ ಅರ್ಥವನ್ನು ಸ್ಫುರಿಸಲು ಸಮರ್ಥವಾಗಿರುತ್ತದೆ. ಕಾಲದಿಂದ ಕಾಲಕ್ಕೆ ಈ ಎಲ್ಲ ಅಂಗ ಉಪಾಂಗಗಳಲ್ಲಿ ಕೆಲವು ಬದಲಾವಣೆಗಳು ಸಂಭವಿಸುತ್ತವೆ. ಈ ಬದಲಾವಣೆಯನ್ನು ಗುರುತಿಸುವ ಕಾರ್ಯವನ್ನೇ ನಾವು ಭಾಷಾಚರಿತ್ರೆಯ ಸಂದರ್ಭದಲ್ಲಿ ಕಾಣುತ್ತೇವೆ.

(ಈ ಘಟಕದ ಪಾಠ ಸಿದ್ಧತೆಗೆ ಮುಕ್ತ ವಿಶ್ವವಿದ್ಯಾನಿಲಯದ ಹಳೆಯ ಪಾಠಗಳ ನೆರವನ್ನೂ ಪಡೆಯಲಾಗಿದೆ)

## ಸಂಚಿಕೆ - 9
## ಕನ್ನಡ ಭಾಷೆಯ ಚರಿತ್ರೆ

## ಘಟಕ - 4
## ಕನ್ನಡ ಶಬ್ದಕೋಶ ಬೆಳವಣಿಗೆ, ದೇಶ್ಯ ಮತ್ತು ಅನ್ಯದೇಶ್ಯ ಪದಗಳು

ಪರಿವಿಡಿ :

## 4.0. ಉದ್ದೇಶ

- ಒಂದು ಭಾಷೆಯಲ್ಲಿನ ಸ್ವಂತ ಶಬ್ದಗಳು ಅಥವಾ ದೇಶ್ಯ ಶಬ್ದಗಳು.
- ದೇಶ್ಯ ಶಬ್ದಗಳಿಗೆ ಹಳೆಗನ್ನಡ ವ್ಯಾಕರಣವನ್ನು ಒಳಗೊಂಡ ಭಾಷಾಶಾಸ್ತ್ರದ ದೃಷ್ಟಿಯಿಂದ ವಿವರಣೆ.
- ಅನ್ಯ ದೇಶ್ಯ-ಶಬ್ದಗಳು.
- ಅನ್ಯ ದೇಶ್ಯ ಶಬ್ದಗಳಿಗೆ ಭಾಷಾ ಶಾಸ್ತ್ರದ ದೃಷ್ಟಿಯಿಂದ ವಿವರಣೆ.
- ಮುಖ್ಯವಾಗಿ ಸಂಸ್ಕೃತ, ಇಂಗ್ಲಿಷ್ ಭಾಷೆಯ ಶಬ್ದಗಳ ಸ್ವೀಕರಣ ಕಾರ್ಯದ ವಿವರಣೆ.

## 4.1. ಪೀಠಿಕೆ

ಸಾಮಾನ್ಯವಾಗಿ ಒಂದು ಶಿಷ್ಟಭಾಷೆಯು ಜೀವಂತಿಕೆಯಿಂದ ಕೂಡಿದ್ದು ಪರಿವರ್ತನಶೀಲವೂ, ವಿಸ್ತರಣಶೀಲವೂ ಆಗಿರುತ್ತದೆ. ಅದು ನಿಂತ ನೀರಲ್ಲ, ಸದಾ ಹರಿಯುವ ಹೊಳೆ ಎನ್ನುತ್ತಾರೆ. ಈ ಭಾಷಾ ಪ್ರವಾಹವು ಹೊಸ ಹೊಸ 'ನೀರುಗಳನ್ನು' ತನ್ನೊಡಲಿಗೆ ಸೇರಿಸಿಕೊಳ್ಳುತ್ತಾ ಮುಂದುವರಿಯುತ್ತದೆ. ಅಂತಹ ಭಾಷೆಯ ಬಳಕೆಯ ವ್ಯಾಪ್ತಿಯೂ ಹೆಚ್ಚಾಗುತ್ತದೆ. ಯಾವ ವಿಷಯವನ್ನಾದರೂ ವಿವರಿಸಬಹುದಾದ ಸತ್ವವನ್ನು ಅಂತಹ ಭಾಷೆಯು ಬೆಳೆಸಿಕೊಂಡಿರುತ್ತದೆ. ಇದಕ್ಕೆ ವ್ಯಕ್ತಿ, ಸಮಾಜ, ಸಮೂಹಮಾಧ್ಯಮಗಳೂ ಕೂಡ ತಮ್ಮ ಕೊಡುಗೆ ನೀಡಿರುತ್ತವೆ. ಹಿಂದೆ ನಿಧಾನವಾಗಿ ಆಗುತ್ತಿದ್ದ ಶಬ್ದಕೋಶದ ಅಭಿವೃದ್ಧಿಯು ಈಗ ಹೆಚ್ಚಿನ ವೇಗದಿಂದ ನಡೆಯುತ್ತದೆ. ಯಾವುದೇ ಶಬ್ದವಾಗಲೀ ನಾಲ್ಕಾರು ಜನರು ಬಳಸಲು ಪ್ರಾರಂಭಿಸಿದರೆ ಅದು ಸ್ಥಿರವಾಗಿ ಉಳಿದುಕೊಳ್ಳುತ್ತದೆ. ಒಂದು ಭಾಷೆಯು ಕಾಲಕಾಲಕ್ಕೆ ಬದಲಾವಣೆಗಳನ್ನು ಅಳವಡಿಸಿಕೊಳ್ಳುತ್ತಾ ಬರುತ್ತದೆ. ಅಂದರೆ ಹಳೆಯ ಶಬ್ದಗಳ ಜಾಗಕ್ಕೆ ಹೊಸ ಶಬ್ದಗಳು ಬರಬಹುದು ಅಥವಾ ಹಳೆಯ ಶಬ್ದಗಳು ಸ್ವಲ್ಪ ರೂಪಾಂತರವನ್ನು ಹೊಂದಬಹುದು. ಈ ಬದಲಾವಣೆ ಆಗುತ್ತಿರುವುದೇ ಜೀವಂತಿಕೆಯ ಲಕ್ಷಣವಾಗಿದೆ. ಕನ್ನಡವು ತೆರೆದ ಮನಸ್ಸಿನಿಂದ ಅನ್ಯಭಾಷೆಗಳಿಂದ ಶಬ್ದಗಳನ್ನು ಸ್ವೀಕರಿಸಿರುವುದರಿಂದ ಅದು ಸತ್ವಪೂರ್ಣವಾದ ಭಾಷೆ ಎನ್ನಿಸಿಕೊಂಡಿದೆ. ಭಾಷೆಯು ಸಮರ್ಥವಾಗಿದ್ದರೂ ಬಳಸುವವರು ಮನಸ್ಸುಮಾಡದಿದ್ದರೆ ಬಾಷೆಯು ನಶಿಸಿಹೋಗುವ ಅಪಾಯವಿರುತ್ತದೆ. ಕನ್ನಡಿಗರು ಕನ್ನಡಬಾಷೆಯ ಸಾಮರ್ಥ್ಯವನ್ನು ಅರಿತು ದುಡಿಸಿಕೊಳ್ಳಬೇಕಾಗಿದೆ.

## 4.2. ಶಬ್ದಕೋಶ ಬೆಳವಣಿಗೆ

ಯಾವುದೇ ಭಾಷೆಗೆ ಒಂದು ಹುಟ್ಟು, ಅದಕ್ಕೊಂದು ಬೆಳವಣಿಗೆ (ಕೆಲವೊಮ್ಮೆ ಸಾವು ಕೂಡ) ಇರುತ್ತದೆ. ಭಾಷೆಯ ಹುಟ್ಟನ್ನು ನೀವು ಈಗಾಗಲೇ ಗಮನಿಸಿರಬಹುದು. ವ್ಯಕ್ತಿಗಳು ಪರಸ್ಪರ ಅಭಿಪ್ರಾಯಗಳನ್ನು ವ್ಯಕ್ತಪಡಿಸುವ ಒಂದು ಸಾಧನವನ್ನಾಗಿ ಭಾಷೆಯನ್ನು ಬಳಸಲಾಗುತ್ತದೆ. ಈ ಸಾಧನವನ್ನು ಮನುಷ್ಯ ಹೇಗೆ ರೂಪಿಸಿಕೊಂಡನೆಂಬುದನ್ನು ಸ್ಪಷ್ಟವಾಗಿ ಕಂಡುಕೊಳ್ಳಲು ಈವರೆಗೆ ಸಾಧ್ಯವಾಗಿಲ್ಲ. ಹಾಗಾಗಿಯೇ ಭಾಷಾ ವಿಜ್ಞಾನಿಗಳು ಭಾಷೆಯ ಉಗಮವನ್ನು ಕುರಿತಂತೆ ಹಲವು ಸಿದ್ಧಾಂತಗಳನ್ನು ಮಂಡಿಸಿದ್ದಾರೆ. **'ದೈವೀ ಮೂಲ ಸಿದ್ಧಾಂತ'** **'ಅನುಕರಣ ಸಿದ್ಧಾಂತ'** **'ಅನುರಣನ ಸಿದ್ಧಾಂತ'**, **'ಶ್ರಮಪರಿಹಾರ ತತ್ವ'** ಮುಂತಾಗಿ ಇವುಗಳನ್ನು ಹೆಸರಿಸಲಾಗುತ್ತದೆ. ಈ ಎಲ್ಲ ಸಿದ್ಧಾಂತಗಳ

ಪ್ರಸ್ತಾಪ ಇಲ್ಲಿ ಅನಗತ್ಯ. ಆದರೂ ಭಾಷೆಯು ಮನುಷ್ಯನಲ್ಲಿ ರೂಪುಗೊಂಡ ಬಗ್ಗೆ ಕೆಲವು ಸಂಗತಿಗಳು ತಿಳಿದಿರುವುದು ಅಪೇಕ್ಷಣೀಯ. ಭಾಷೆಯ ಉಗಮವನ್ನು ಸ್ಪಷ್ಟವಾಗಿ ಗುರುತಿಸಲಾಗದ ಕಾರಣಕ್ಕೋ ಏನೋ ಭಾಷೆಯು ಮನುಷ್ಯನಿಗೆ ದೈವದತ್ತವಾಗಿ ಬಂದ ಒಂದು ವರ ವಿಶೇಷ ಎಂಬ ಅಭಿಪ್ರಾಯವಿತ್ತು. ಅವಬೇಕಾದ ಭಾಷೆಯನ್ನು ದೇವರೇ ಮನುಷ್ಯನಿಗೆ ಸೃಷ್ಟಿಸಿಕೊಟ್ಟ ಎಂಬುದು ಈ ಅಭಿಪ್ರಾಯದ ಒಟ್ಟು ತಾತ್ಪರ್ಯ. ಆದರೆ ಈ ಸಿದ್ಧಾಂತವನ್ನು ಅನೇಕ ಭಾಷಾ ವಿಜ್ಞಾನಿಗಳು ಒಪ್ಪುವುದಿಲ್ಲ. ಏಕೆಂದರೆ ಇದರಲ್ಲಿ ನಂಬಿಕೆಯು ಪ್ರಧಾನ ಪಾತ್ರ ವಹಿಸುತ್ತದೆಯೇ ಹೊರತು ಭಾಷೆಯು ಹುಟ್ಟನ್ನು ಕುರಿತು ವಾಸ್ತವಾದ ಕಾರ್ಯ ಕಾರಣ ಸಂಬಂಧ ಇಲ್ಲ. ಉದಾಹರಣೆಗೆ ಅನುಕರಣ ಸಿದ್ಧಾಂತದ ಪ್ರಕಾರ, ಮನುಷ್ಯನು ಪ್ರಕೃತಿಯ ಇತರ ಜೀವರಾಶಿಗಳು ಮಾಡುವ ಶಬ್ದಗಳನ್ನು ಅನುಕರಣೆ ಮಾಡುವ ಮೂಲಕ ಭಾಷೆಯನ್ನು ರೂಪಿಸಿಕೊಂಡ ಎನ್ನಲಾಗುತ್ತದೆ. ಸೃಷ್ಟಿಯಲ್ಲಿಯೇ ಅತ್ಯಂತ ಮುಂದುವರಿದ ಪ್ರಾಣಿಯಾಗಿರುವ ಮನುಷ್ಯನು ಇತರ ಜೀವರಾಶಿಗಳ ಧ್ವನಿಯನ್ನು ಅನುಕರಣೆ ಮಾಡಿ ಬಾಷೆಯನ್ನು ರೂಪಿಸಿಕೊಂಡ ಎಂಬುದು ಅಷ್ಟೇನು ಸರಿಯಾದ ವಾದವಲ್ಲ ಎಂಬುವವರೂ ಇದ್ದಾರೆ. ಪ್ರಾಕೃತಿಕ ಶಬ್ದಗಳ ಅನುಸರಣೆಯಿಂದ ಭಾಷೆ ಹುಟ್ಟಿರಬೇಕೆಂಬುದು ಮತ್ತೊಂದು ಸಿದ್ಧಾಂತ. ಇದನ್ನು ಅನುರಣನ ಸಿದ್ಧಾಂತವೆನ್ನಲಾಗುತ್ತದೆ. ಗಂಟೆಯ ಸದ್ದು, ಮರದ ಕೊಂಬೆಗಳ ಉಜ್ಜುವಿಕೆಯಿಂದ ಉಂಟಾದ ಶಬ್ದ, ಬೀಸುವ ಗಾಳಿ ಶಬ್ದ ಮುಂತಾದ ಉದಾಹರಣೆಗಳನ್ನು ನೀಡಿ. ಇವುಗಳು ಮನುಷ್ಯನ ಮನಸ್ಸಿನ ಮೇಲೆ ಬೀರಿದ ಪ್ರಭಾವವೇ ಭಾಷೆಯು ಉಗಮಕ್ಕೆ ಕಾರಣ ಎಂಬುದು ಇಲ್ಲಿನ ಮುಖ್ಯ ತತ್ತ್ವ. ಈ ಸಿದ್ಧಾಂತಗಳಲ್ಲದೆ, ಶ್ರಮ ಸಾಧ್ಯವಾದ ಕೆಲಗಳನ್ನು ಮಾಡುತ್ತಿದ್ದ ಮನುಷ್ಯ, ತನಗೆ ಆಯಾಸವಾಗದಿರಲೆಂದು ಕೆಲಸ ಮಾಡುತ್ತಿರುವಾಗ ಹೊರಡಿಸುವ ಶಬ್ದಗಳು ಭಾಷೆಯ ಹುಟ್ಟಿಗೆ ಕಾರಣವಾಗಿರಬೇಕು ಎನ್ನಲಾಗುತ್ತದೆ. ಉದಾ ಭಾರ ಎತ್ತುವಾಗ, ಬಟ್ಟೆ ಒಗೆಯುವ ಸಂದರ್ಭದಲ್ಲಿ ನಮಗೆ ಅರಿವಿಲ್ಲದಂತೆಯೇ ನಮ್ಮ ಬಾಯಿಯಿಂದ ಶಬ್ದಗಳು ಹೊರಡುತ್ತವೆ. ಇವು ಒಂದರ್ಥದಲ್ಲಿ ಆ ಶ್ರಮದ ಆಯಾಸಆಗದಂತೆ ಮರೆಯುವಂತೆ ಮಾಡುತ್ತವೆ. (ಈ ಅನುಭವ ನಿಮ್ಮ ಗಮನಕ್ಕೂ ಬಂದಿರಬಹುದು). ಹೀಗೆ ಹೊರಟ ಶಬ್ದಗಳೇ ಮುಂದೆ ಮನುಷ್ಯನಲ್ಲಿ ಭಾಷೆಯ ಉಗಮಕ್ಕೆ ಕಾರಣವಾಗಿರಬೇಕೆಂಬುದು ಇಲ್ಲಿನ ವಾದ. ಇದನ್ನು 'ಶ್ರಮ ಪರಿಹಾರ ತತ್ವ' ಎಂದು ಕರೆಯಲಾಗುತ್ತದೆ. ಇನ್ನು ಕೆಲವು ಸಿದ್ಧಾಂತಗಳಿವೆ. ಅವುಗಳಿಗೆ ಕೂಡ ತಮ್ಮದೇ ಆದ ಕೆಲವು ಮಿತಿಗಳಿವೆ.

ಭಾಷೆಯ ಉಗಮವನ್ನು ಕುರಿತು ಯಾವುದೇ ಒಂದು ನಿರ್ದಿಷ್ಟ ಸಿದ್ಧಾಂತವನ್ನು ಹೇಳಲು ಬರುವುದಿಲ್ಲ ಎಂಬುದು ಇದರಿಂದ ತಿಳಿಯುತ್ತದೆ. ಕೆಲಮಟ್ಟಿಗೆ ಈ ಸಿದ್ಧಾಂತಗಳು ಅಂಶಿಕವಾಗಿ ಭಾಷೆಯ ಹುಟ್ಟಿಗೆ ಕಾರಣವಾಗಿರಬಹುದು. ಇದು ಇಲ್ಲಿ ನಾವು ಗಮನಿಸಬೇಕಾದ ಮುಖ್ಯ ವಿಚಾರ. ಭಾಷೆಯ ಉಗಮ ಹೇಗೆಯೇ ಆಗಿರಲಿ, ಒಂದು ಭಾಷೆಯಲ್ಲಿ ಬಳಕೆಯಾಗುವ ಶಬ್ದಗಳು ಯಾದೃಚ್ಛಿಕವಾದವುಗಳು. ವಸ್ತುವನ್ನು ಗುರುತಿಸುವ ಶಬ್ದಗಳಾಗಲಿ, ಭಾವವನ್ನು ವ್ಯಕ್ತಪಡಿಸುವ ಪದಗಳಾಗಲಿ ಎಲ್ಲವೂ ಯಾದೃಚ್ಛಿಕ. ಅಂದರೆ ಆ ವಸ್ತುವಿಗೂ ಆ ಭಾವ ಸೂಚನೆಯಲ್ಲಿ ಬಳಕೆಯಾಗುವ ಶಬ್ದಗಳಿಗೂ ಯಾವುದೇ ನೇರ ಸಂಬಂಧವಿರುವುದಿಲ್ಲ. ಈ ವಸ್ತುವನ್ನು ಅಥವಾ ಭಾವವನ್ನು ಸೂಚಿಸಲು ಈ ಶಬ್ದಗಳನ್ನು ಬಳಸಬೇಕು ಎಂಬುದು ಆ ಭಾಷೆ ಬಳಕೆಯಲ್ಲಿರುವ ಸಮಾಜ ಸಮುದಾಯದಿಂದ ಒಪ್ಪಿತವಾಗಿರುತ್ತದೆ ಅಷ್ಟೇ ಇದರಿಂದಾಗಿ ಒಂದೇ ವಸ್ತು-ಭಾವ ಪ್ರಕಟಣೆಗೆ ಒಂದೊಂದು (ಭಾಷಾ) ಸಮಾಜ-ಸಮುದಾಯದವರು ಬೇರೆ ಬೇರೆ (ಧ್ವನಿಗಳನ್ನು) ಶಬ್ದಗಳನ್ನು ಬಳಸುತ್ತಾರೆ.

ಪ್ರತಿ (ಭಾಷಾ) ಸಮುದಾಯಕ್ಕೆ ಪ್ರತ್ಯೇಕವಾದ ಶಬ್ದ-ಪದಗಳು ಇರುವ ಕಾರಣಕ್ಕಾಗಿಯೇ ಭಾಷೆಗಳು ಅನೇಕವಾಗಿವೆ.

ಹೀಗೆ ಯಾವುದೋ ಸಂದರ್ಭದಲ್ಲಿ ಮತ್ತು ಯಾವುದೋ ರೂಪದಲ್ಲಿ ಹುಟ್ಟಿದ ಒಂದು ಭಾಷೆ ಅನಂತರ ಬೆಳವಣಿಗೆಯನ್ನು ಹೊಂದುತ್ತಾ ಹೋಗುತ್ತದೆ. ಒಂದು ಅಕ್ಷರದಿಂದ ಮೊದಲುಗೊಂಡು ಹಲವು ಅಕ್ಷರಗಳಿರುವ ಪದಗಳು ಸೃಷ್ಟಿಯಾಗುತ್ತವೆ. 13ನೆಯ ಶತಮಾನದಲ್ಲಿದ್ದ ಕನ್ನಡ ವ್ಯಾಕರಣಕಾರ ಕೇಶಿರಾಜ ಎಂಬುವನು, ಕನ್ನಡದಲ್ಲಿ ಒಂದು ಅಕ್ಷರದಿಂದ ಐದು ಅಕ್ಷರಗಳವರೆಗಿನ ಪದಗಳು ಇರುವುದಾಗಿ ತಿಳಿಸಿದ್ದಾನೆ. ಈ ಉದಾಹರಣೆ ನೋಡಿ: 'ಪೂ, ಮರ, ಕವಳಿಗೆ, ಕಟ್ಟುವತ್ತಿಗೆ'. ಒಂದು ವಸ್ತುಗೆ ಬಳಸುವ ಸರಳವಾದ (ನಾಮ) ಪದದಿಂದ ಮೊದಲುಗೊಂಡು ಮನಸ್ಸಿನ ಅತ್ಯಂತ ಸಂಕೀರ್ಣವಾದ ಭಾವವನ್ನು ಸೂಚಿಸುವ ಪದಗಳು ಸೃಷ್ಟಿಯಾಗಿವೆ. ಭಾಷೆಯು ಬೆಳೆಯುವುದು, ಅದಕ್ಕೊಂದು ನಿರ್ದಿಷ್ಟ ರೂಪ ಬರುವದು ತುಂಬಾ ನಿಧಾನವಾಗಿ ನಡೆಯುವ ಕ್ರಿಯೆ ಎಂಬುದು ನಿಮ್ಮ ಗಮನದಲ್ಲಿರಲಿ.

## ದೇಶ್ಯ ಪದಗಳು

ಒಂದು ಭಾಷೆಯಲ್ಲಿರುವ ಪದಗಳನ್ನು ಆದೂ ಭಾಷಿಕರಿಂದ ಸೃಷ್ಟಿಯಾದ ಮೂಲ (ಸಹಜ) ಪದಗಳು, ಆ ಪಾದಗಳ ನೆರವಿನಿಂದ ಹುಟ್ಟಿದ ನಿಷ್ಪನ್ನ ಪದಗಳು ಸಮಾಸ ಪದಗಳು ಮತ್ತು ನೆರೆಯ ಭಾಷೆಗಳು ಬಂದ ಅನ್ಯದೇಶ್ಯಪಾದಗಳು ಎಂದು ಒಂದು ವರ್ಗೀಕರಣವನ್ನು ಮಾಡಬಹುದು. ಆಯಾ ಭಾಷೆಯಲ್ಲಿ ಹುಟ್ಟಿದ ಸ್ವತಂತ್ರ ಪದಗಳೇ ದೇಶ್ಯಪದಗಳು.

ಭಾಷೆಯಲ್ಲಿ ವಸ್ತು, ಗುಣ, ಭಾವ ಮೊದಲಾದುವನ್ನು ಸೂಚಿಸುವ **ನಾಮಪದಗಳು**, ಕ್ರಿಯೆಯನ್ನು ಸೂಚಿಸುವ **ಕ್ರಿಯಾಪದಗಳು**, ನಾಮಪದ ಮತ್ತು ಕ್ರಿಯಾಪದಗಳಿಗೆ ಹಚ್ಚುವ **ಪ್ರತ್ಯಯಗಳು**, ಪ್ರತ್ಯಯಗಳನ್ನು ಹತ್ತಿಸಿಕೊಳ್ಳದ **ಅವ್ಯಯಗಳು** ಎಂದು ಮುಂತಾಗಿ ಪದಗಳ ಭಂಡಾರವೇ ಇರುತ್ತದೆ. (ಈ ಎಲ್ಲ ವಿಚಾರಗಳನ್ನು ವಿಶ್ಲೇಷಿಸುವ ಶಾಸ್ತ್ರವೇ ವ್ಯಾಕರಣ).

ಮನುಷ್ಯ-ಹೆಂಗಸು, ಗಂಡಸು, ಸೀತೆ, ರಾಮ, ಪ್ರಾಣಿ-ಸಿಂಹ ಮುಂತಾದುವು **ವಸ್ತುವಾಚಕಗಳು**. ಇವು ಚೇತನವುಳ್ಳ ವಸ್ತುಗಳು. ಇದರಲ್ಲದೆ ಗಿಡ, ಮರ, ನೀರು, ಕಲ್ಲು, ಬೆಟ್ಟ, ನದಿ, ಊರು ಮೊದಲಾದ ಚೇತನವಿಲ್ಲದ ವಸ್ತುವಾಚಕಗಳೂ ಭಾಷೆಯಲ್ಲಿ ಪ್ರಯೋಗಗೊಳ್ಳುತ್ತವೆ. ಚಿಕ್ಕ, ದೊಡ್ಡ, ಕೆಟ್ಟ, ಒಳ್ಳೆಯ, ಹೊಸ, ಹಳೆಯ ಮುಂತಾದ ಪದಗಳು **ಗುಣವಾಚಕಗಳು**, ಕಪ್ಪು, ಬಿಳುಪು, ಹಮ್ಮೆ, ಮುಂತಾದವು **ಭಾವನಾಮಗಳು**. ಹಾಗೆಯೇ ಅಷ್ಟು, ಇಷ್ಟು, ಎಷ್ಟು, ಹಲವು, ಕೆಲವು, ಮುಂತಾದವು **ಪರಿಮಾಣವಾಚಕಗಳು**. ನಾನು, ನೀನು, ಅವನು ಅವಳು, ಅದು, ಇದು ಮುಂತಾದುವು **ಸರ್ವನಾಮಗಳು**. ಈ ಸರ್ವನಾಮಗಳನ್ನು ನಾಮಪದಕ್ಕೆ ಬದಲಾಗಿ ಬಳಸಲಾಗುತ್ತದೆ. ಒಂದು ಎರಡು ಎಂದು ಮುಂತಾಗಿ ಹತ್ತು ನೂರು ಇವು **ಸಂಖ್ಯಾವಾಚಕಗಳು**.

ಹೀಗೆ ಮನುಷ್ಯ, ಪ್ರಾಣಿ, ವಸ್ತು, ಕಾಲ, ಸ್ಥಾನ, ಅಳತೆ, ದಿಕ್ಕು ಸಂಖ್ಯೆಗಳನ್ನು ಸೂಚಿಸುವ ಶಬ್ದಗಳು ಸಹಜ ನಾಮ ಪ್ರಕೃತಿಗಳು ಇದಲ್ಲದೆ ಕೃದಂತ ಶಬ್ದಗಳು, ತದ್ಧಿತಾಂತ ಶಬ್ದಗಳು, ಸಮಾಸ

ಶಬ್ದಗಳು ನಿಷ್ಪನ್ನ ನಾಮಪ್ರಕೃತಿಗಳು ಒಂದು ಭಾಷಾ ಪದ ಸಮೂಹದಲ್ಲಿ ಇರುತ್ತದೆ. ಇವುಗಳ ಬಗ್ಗೆ ಮುಂದೆ ತಿಳಿಯಲಿದ್ದೀರಿ.

ಅರ್ಥದ ದೃಷ್ಟಿಯಿಂದ ನಾಮವಾಚಕಗಳನ್ನು ರೂಢನಾಮ, ಅಂಕಿತನಾಮ, ಅನ್ವರ್ಥನಾಮ ಮತ್ತು ಭಾವನಾಮ ಎಂದು ವಿಂಗಡಿಸಿ ನೋಡಬಹುದು. ಗಂಡು, ಹೆಣ್ಣು, ಪಕ್ಷಿ, ಮರ, ನದಿ, ಊರು ಪ್ರಾಣಿ ಈ ಬಗೆಯ ಪದಗಳು **ರೂಢನಾಮಗಳು**. ಗಂಡು ಎಂಬುದು ರೂಢನಾಮವಾದರೆ ರಾಮ, ಕೃಷ್ಣ, ಗಾಂಧೀಜಿ ಮೊದಲಾದ ಹೆಸರುಗಳು **ಅಂಕಿತನಾಮ** ಗಳೆನಿಸುತ್ತವೆ. ನಿರ್ದಿಷ್ಟವಾಗಿ ಒಬ್ಬ ವ್ಯಕ್ತಿ, ಒಂದು ಪಕ್ಷಿ. ಒಂದು ಮರದ ಒಂದು ಊರಿನ ಹೆಸರುಗಳನ್ನು ಒಳಗೊಂಡ ಪದಗಳು ಅಂಕಿತನಾಮಗಳು ಎನಿಸಿಕೊಳ್ಳುತ್ತವೆ.

ಇನ್ನು ಕೆಲವು ಪದಗಳನ್ನು ಬಳಸುತ್ತೇವೆ. ಉದಾಹರಣೆಗೆ ಕುಂಟ, ಕುರುಡ, ಹೆಳವ, ಮೂಗ, ಎನ್ನುವಂತಹ ಈ ಬಗೆಯ ಪದಗಳನ್ನು **ಅನ್ವರ್ಥನಾಮ** ಎನ್ನುತ್ತೇವೆ. ಮತ್ತೊಂದು ಬಗೆಯ ನಾಮಪದಗಳು **ಭಾವನಾಮಗಳು**. ಇವು ಒಂದು ವಸ್ತುವಿನ ಸ್ವಭಾವವನ್ನೋ ಸ್ಥಿತಿಯನ್ನೋ ತಿಳಿಸುತ್ತವೆ. ಉದಾಹರಣೆ ಬಿಳುಪು, ಬಡತನ, ಕುರುಡು ಇತ್ಯಾದಿ. (ಕುರುಡ ಎಂದರೆ ಆಗ ಅದು ಅನ್ವರ್ಥನಾಮವಾಗುತ್ತದೆ. ಆದರೆ ಕುರುಡು ಎಂಬುದು ಭಾವನಾಮ.)

ಹೀಗೆ ನಾಮವಾಚಕಗಳಲ್ಲಿ ರೂಢ, ಅಂಕಿತ ಮತ್ತು ಭಾವನಾಮ ಎಂದು ಮುಖ್ಯವಾಗಿ ಮೂರು ವಿಭಾಗ ಮಾಡಿಕೊಳ್ಳಬಹುದು ಕೆಲವೊಮ್ಮೆ ಭಾವನಾಮವನ್ನು ಸ್ವತಂತ್ರ ವರ್ಗವೆಂದು ಪರಿಗಣಿಸಿ ಅನ್ವರ್ಥನಾಮವನ್ನು ವಸ್ತುವಾಚಕಗಳಲ್ಲಿಯೇ ಸೇರಿಕೊಳ್ಳಲಾಗುತ್ತದೆ.

## ಕೃದಂತ

ಭಾಷೆಯಲ್ಲಿ ಬಳಕೆಯಾಗುವ ಪದಗಳಲ್ಲಿ ಮತ್ತೊಂದು 'ವರ್ಗ' ಇದೆ. ಅದನ್ನು 'ಕ್ರಿಯಾಪದ' ಗಳು ಎನ್ನುತ್ತೇವೆ. ಕ್ರಿಯೆ (ಕೆಲಸ) ವನ್ನು ಸೂಚಿಸುವ ಪದಗಳು ಅವು. ಉದಾ. ನೋಡು, ನುಡಿ, ಓದು, ಕೊಡು, ನಿಲ್ಲು ಮುಂತಾದ ಈ ಪದಗಳನ್ನು ಗಮನಿಸಿ. ಇಲ್ಲೆಲ್ಲ ನಿರ್ದಿಷ್ಟ ಕ್ರಿಯೆ ಸೂಚಿತವಾಗಿದೆ. ಕ್ರಿಯಾಪದದ ಮೂಲ ರೂಪವನ್ನು ಧಾತು ಎನ್ನುತ್ತಾರೆ. ಧಾತುಗಳ ಮೇಲೆ ಕೃತ್ ಪ್ರತ್ಯಯಗಳು ಹತ್ತುವುದರಿಂದ 'ಕೃದಂತನಾಮ ಪ್ರಕೃತಿ' ಎನ್ನುತ್ತಾರೆ. ಈ ಕೃದಂತ ನಾಮಪದಗಳ ಮೇಲೆ ವಿಭಕ್ತಿ ಪ್ರತ್ಯಯಗಳು ಸೇರಿದಾಗ ಅವುಗಳನ್ನು 'ಕದಂತ ನಾಮಪದಗಳು' ಎನ್ನುತ್ತೇವೆ. ಧಾತುಗಳ ಮೇಲೆ ಅಲು, ಅದೆ, ಉತ್ತ, ದು, ಅಲಿಕ್ಕೆ ಇತ್ಯಾದಿ ಪ್ರತ್ಯಯಗಳು ಸೇರಿ ಕೃದಂತಾವ್ಯಗಳು ರೂಪುಗೊಳ್ಳುತ್ತವೆ.

## ತದ್ಧಿತಾಂತಗಳು

'ನಾಮಪ್ರಕೃತಿ' ಗಳಿಗೆ ಬೇರೆ ಬೇರೆ ಅರ್ಥಗಳಲ್ಲಿ ಬೇರೆ ಬೇರೆ ಪ್ರತ್ಯಯಗಳು ಸೇರಿ ತದ್ಧಿತಾಂತ ಗಳಾಗುತ್ತವೆ' ಈ ಕೆಲವು ಉದಾಹರಣೆಗಳನ್ನು ಗಮನಿಸಿ.

ಕನ್ನಡ + ಇಗ = ಕನ್ನಡಿಗ

ಜಾದು + ಕಾರ = ಜಾದುಗಾರ

ಹಣ + ವಂತ = ಹಣವಂತ

ಹಾವು + ಆಡಿಗ = ಹಾವಾಡಿಗ

ಕಲ್ಲು + ಕುಟಿಗ = ಕಲ್ಲುಕುಟಿಗ

ಚಾಡಿ + ಕೋರ = ಚಾಡಿಕೋರ

ಮಡಿ + ವಾಳ = ಮಡಿವಾಳ

ಕನ್ನಡ, ಜಾದು, ಹಣ, ಹಾವು ಮೊದಲಾದ ಪದಗಳಿಗೆ ಇಗ, ಗಾರ, ವಂತ, ಆಡಿಗ ಮೊದಲಾದ ರೂಪಗಳು ಸೇರಿರುವುದು ನಿಮಗೆ ಕಾಣುತ್ತದೆ. ಈ ರೂಪಗಳು (ತದ್ಧಿತ) ಪ್ರತ್ಯಯಗಳು. ಈ (ತದ್ಧಿತ) ಪ್ರತ್ಯಯಗಳು ಪದಗಳೊಡನೆ ಸೇರಿ ಬಳಕೆಯಾಗುವುದರಿಂದ ಭಾಷೆಗೆ ಒಂದು ಬಗೆಯ ಸಂಕ್ಷಿಪ್ತತೆ, ಸೌಲಭ್ಯ ಲಭ್ಯವಾಗುತ್ತದೆ. ಉದಾಹರಣೆ: 'ಕನ್ನಡವನ್ನು ಮಾತುನಾಡುವರು ಕರುಣೆಗಳು' ಎಂಬ ವಾಕ್ಯವನ್ನು 'ಕನ್ನಡಿಗರು ಕರುಣೆಗಳು' ಎಂದು ಸಂಕ್ಷೇಪಿಸಬಹುದು. ಇದು ಕನ್ನಡ ಎಂಬ ಪದಕ್ಕೆ ತದ್ಧಿತಾಂತ ಪ್ರತ್ಯಯ ಸೇರಿಕೊಂಡುದರಿಂದ ಮಾತ್ರ ಸಾಧ್ಯಾಗಿದೆ ಎಂಬುದನ್ನು ಗಮನಿಸಬೇಕು. **ಶಬ್ದಕೋಶದ ಬೆಳವಣಿಗೆಯುಲ್ಲಿ ಈ ತದ್ಧಿತಾಂತಗಳು ಪಾತ್ರವೂ ಬಹಳ ಮುಖ್ಯವಾದುದು. ದೇಶ್ಯ ಶಬ್ದ ಸಂಪತ್ತನ್ನು ಇವು ಹೆಚ್ಚಿಸುತ್ತವೆ.**

ಪ್ರತ್ಯಯ ಹತ್ತಿದ ಇಂತಹ ಇನ್ನು ಹಲವು ಪ್ರಯೋಗಗಳನ್ನು ನಾವು ಬಳಸುತ್ತೇವೆ. ನೋಡಿ: ಜೀಗಿತಿ, ಗೌಡತಿ, (ಇತಿ ಪ್ರತ್ಯಯ), ಒಕ್ಕಲಗಿತ್ತಿ, ಓರಗಿತ್ತಿ, ಹೂವಾಡಗಿತ್ತಿ (ಇತ್ತಿ ಪ್ರತ್ಯಯ).

ನಾಮಪದಗಳ ಮುಂದೆ ಭಾವಾರ್ಥದಲ್ಲಿ ತನ, ಇಕೆ, ಪು, ಮೆ ಮುಂತಾದ ಪ್ರತ್ಯಯಗಳು.

ಒಂದು ಭಾಷೆಯಲ್ಲಿ ಬಳಕೆಯಾಗುವ ಒಂದು ಪದಕ್ಕೆ ಅದೇ ಅರ್ಥವನ್ನು ಕೊಡುವ ಬೇರೊಂದು ಪದ ಅಥವಾ ಪದಗಳು ಇರುತ್ತವೆ. ಭಾಷೆಯು ಬೆಳೆಯುವ ಸಂದರ್ಭದಲ್ಲಿ ಅದು ಪಡೆದುಕೊಂಡಿರುವ ಒಂದು ವಿಶಿಷ್ಟ ರೂಪ ಇದು.

ಉದಾ

ಕಾಡು : ವನ, ಬನ, ವಿಪಿನ, ಕಾನನ, ಅಟವಿ

ರಾಕ್ಷಸ : ರಕ್ಕಸ, ದಾನವ, ದನುಜ, ದೈತ್ಯ

ಸಮುದ್ರ : ಅಂಬುಧಿ, ಜಲದಿ, ಸಾಗರ, ಅಬ್ಧಿ ಇತ್ಯಾದಿ

ಇವುಗಳನ್ನು '**ಸಮಾನಾರ್ಥಕ ಪದಗಳು**' ಎಂದು ಕರೆಯುತ್ತೇವೆ. ಇನ್ನು ಕೆಲವೊಮ್ಮೆ ಒಂದೇ ಪದಕ್ಕೆ ಅನೇಕ ಅರ್ಥಗಳು ಇರುವುದುಂಟು ಉದಾ: ಹರಿ ಎಂಬ ಪದಕ್ಕೆ ವಿಷ್ಣು ಎಂಬ ಅರ್ಥವಿರುವಂತೆಯೇ, ಕೃಷ್ಣ, ಚಂದ್ರ, ಸಿಂಹ, ಕುದುರೆ, ಕೋಗಿಲೆ ಎಂಬ ಅರ್ಥಗಳೂ ಇವೆ. ಇವುಗಳನ್ನು '**ಅನೇಕಾರ್ಥಪದಗಳು**' ಎಂದು ಕರೆಯಬಹುದು. ಹೀಗೆಯೇ 'ವಿರುದ್ಧಾರ್ಥಕ' ಪದಗಳು ಭಾಷೆಯಲ್ಲಿ ರೂಪುಗೊಳ್ಳುತ್ತವೆ. ಮೇಲೆ ಎಂಬುದಕ್ಕೆ ಕೆಳಗೆ ಎಂಬುದು ವಿರುದ್ಧ ಪದ. ಇವೆರಡೂ ಸ್ವತಂತ್ರ ಪದಗಳು. ಹೀಗಲ್ಲದೆ ಕೆಲವು ವಿರುದ್ಧ ಪದಗಳ ಸೃಷ್ಟಿಯು ಮೂಲ ಪದವನ್ನು (ನಿರ್ದಿಷ್ಟ ರೀತಿಯಲ್ಲಿ) ಸ್ವಲ್ಪ ಬದಲಿಸಿ ಹೇಳುವುದರಿಂದ ರೂಪಿಸಿಕೊಳ್ಳಲಾಗುತ್ತದೆ.

ಉದಾ:

ಆಸಕ್ತಿ - ನಿರಾಸಕ್ತಿ, ಆಸೆ - ನಿರಾಸೆ

ಸಜ್ಜನ - ದುರ್ಜನ ಪೂರ್ಣ - ಅಪೂರ್ಣ

ಪುರಸ್ಕಾರ - ತಿರಸ್ಕಾರ ಅಭಿಮಾನಿ - ನಿರಭಿಮಾನ

ಮೊದಲಾದ ಉದಾಹರಣೆಗಳನ್ನು ಇಲ್ಲಿ ನೋಡಬಹುದು.

ಸೇರಿ ತದ್ಧಿತಾಂತ ಭಾವನಾಮಗಳಾಗುತ್ತವೆ.

ಉದಾಹರಣೆ ನೋಡಿ.

ತನ : ದೊಡ್ಡತನ, ಸಣ್ಣತನ, ಹುಡುಗತನ, ಸೋಮಾರಿತನ, ಸಿರಿತನ

ಇಕೆ : ಗೌಡಿಕ, ಚಲುವಿಕೆ, ತಳಾರಿಕೆ, ಯಜಮಾನಿಕೆ.

ಪು : ಬಿಳುಪು, ಕಪ್ಪು, ತಂಪು, ನುಣ್ಪು.

ಮೆ : ಜಾಣ್ಮೆ, ತಾಳ್ಮೆ, ಮೇಲ್ಮೆ, ಕೂರ್ಮೆ, ಪೆರ್ಮೆ.

ತದ್ಧಿತಾಂತಗಳಲ್ಲಿ ತದ್ಧಿತಾಂತಾವ್ಯಗಳೂ ಬಹುಮುಖ್ಯ ಪಾತ್ರವಹಿಸುತ್ತವೆ. ಕಲವು ಪ್ರತ್ಯಯಗಳು ನಾಮಪವಗಳ ಮುಂದೆ ಸೇರಿ ತದ್ಧಿತಾಂತಾವ್ಯಗಳಾಗಿ ಪರಿಗಣಿತವಾಗುತ್ತವೆ. 'ಅಂತೆವೊಲ್, ವೊಲು, ತನಕ, ವರೆಗೆ, ಮಟ್ಟಿಗೆ, ಓಸ್ಕರ, ಓಸುಗ ಸಲುವಾಗಿ' ಮೊದಲಾದ ಅವ್ಯಯಗಳು ಸೇರಿರುವ ಈ ಉದಾಹರಣೆಗಳನ್ನು ಗಮನಿಸಿ.

ಅಂತೆ : ರಾಮನಂತೆ, ಅದರಂತೆ, ಅವಳಂತೆ, ಸಮುದ್ರದಂತೆ

ವೋಲ್ : ಸೂರ್ಯನವೋಲ್,ಚಂದ್ರನವೋಲ್, ಸಿಂಹದವೋಲ್, ಬಿರುಗಾಳಿಯವೋಲ್

ವೊಲು : ರಾಣಿಯೊಲು, ಆನೆಯೊಲು, ಅವನೊಲು, ಅದರೊಲು

ತನಕ : ಮನೆತನಕ, ಕೊನೆತನಕ, ಅಲ್ಲಿಯತನಕ.

ವರೆಗೆ : ಮನೆಯವರೆಗೆ, ಕೊನೆಯವರೆಗೆ, ಅಲ್ಲಿಯವರೆಗೆ

ಓಸ್ಕರ : ಮನೆಗೋಸ್ಕರ, ಅವರಿಗೋಸ್ಕರ, ಅದಕ್ಕೋಸ್ಕರ

ಓಸುಗ : ಮನೆಗೋಸುಗ, ಅವರಿಗೋಸುಗ, ಅದಕ್ಕೋಸುಗ

ಸಲುವಾಗಿ : ಮನೆಯ ಸಲುವಾಗಿ, ಅವರ ಸಲುವಾಗಿ, ಅದರ ಸಲುವಾಗಿ

ಒಂದು ಭಾಷೆಯ ಶಬ್ದಭಂಡಾರದಲ್ಲಿ ಎರಡೆರಡು ಪದಗಳು ಒಟ್ಟು ಸೇರಿ ಒಂದು ಪದವಾಗಿ ಬಳಕೆಯಾಗುವ ಪದಗಳಿರುತ್ತವೆ ಭಾಷೆ ತಾನು ಬೆಳೆಯುವ ಸಂದರ್ಭದಲ್ಲಿ ಈ ಬಗೆಯ ಪದಗಳನ್ನೂ ರೂಪಿಸಿಕೊಂಡು ಸಂವೃದ್ಧವಾಗುತ್ತದೆ. ಶಬ್ದ ಸಂಪತ್ತನ್ನು ಹೆಚ್ಚಿಸಿಕೊಳ್ಳುತ್ತದೆ. ಉದಾಹರಣೆ ನೋಡಿ: ಮಳೆಗಾಲ, ಊರಗೌಡ, ಕಣ್ಣುರುಡ, ಪರಿಹಾರನಿಧಿ, ಸವಿಗಾನ, ಚರಣಕಮಲ, ತ್ರಿನೇತ್ರ, ಮೈಮರೆ, ಇಲ್ಲೆಲ್ಲ ಎರಡೆರಡು ಪದಗಳು ಕೂಡಿ ಒಂದು ಪದವಾಗಿರುವುದನ್ನು ಗಮನಿಸಿ ಮಳೆ ಮತ್ತು ಕಾಲ, ಊರು ಮತ್ತು ಗೌಡ, ಕಣ್ಣು ಮತ್ತು ಕುರುಡ ಹೀಗೆ ಇಂತಹ ರೂಪಗಳನ್ನು ನಾವು 'ಸಮಾಸ ಶಬ್ದ' ಗಳು ಎನ್ನುತ್ತೇವೆ.

ಈವರೆಗಿನ ವಿಚಾರಗಳನ್ನು ಗಮನಿಸಿದರೆ ಒಂದು ಭಾಷೆಯಲ್ಲಿ ಬಳಕೆಯಾಗುವ ಶಬ್ದ ಸಂಪತ್ತು ಹೇಗೆ ನಾಮವಾಚಕ ಕ್ರಮವಾಚಕ, ಅವ್ಯಯ, ಮತ್ತು ಸಮಾಸ ಪದಗಳಿಂದ ಕೂಡಿರುತ್ತದೆ ಎಂಬ ಅಂಶ ಮುಖ್ಯವಾಗಿ ನಮ್ಮ ಗಮನಕ್ಕೆ ಬರುತ್ತದೆ.

ಈ ವಿಚಾರಗಳೆಲ್ಲವೂ ಒಂದು ಭಾಷೆ ತನ್ನಲ್ಲಿಯೇ ರೂಪುಗೊಳ್ಳುವ ಭಾಷಿಕ ಪ್ರಕ್ರಿಯೆಗಳನ್ನು ಕುರಿತದ್ದು. ಇದಲ್ಲದೆ ಒಂದು ಭಾಷೆಗೆ ಅನ್ಯಭಾಷೆಗಳ ಸಂಸರ್ಗದಿಂದ ಕೂಡ ಶಬ್ದಸಂಪತ್ತು ಬೆಳೆಯುತ್ತದೆ. ಕನ್ನಡ ಶಬ್ದಭಂಡಾರಕ್ಕೆ ಬಂದು ಸೇರಿದ ಅನ್ಯ ಭಾಷೆಗಳು ಯಾವುವು? ಅವು ನಮ್ಮಲ್ಲಿ ಪಡೆದುಕೊಂಡ ರೂಪ ಮತ್ತು ಅರ್ಥಗಳು ಎಂಥವು ಎಂಬುದನ್ನು ಇನ್ನು ಮುಂತೆ ನೋಡೋಣ.

## 4.3 ಅನ್ಯದೇಶ್ಯ ಪದಗಳು

ಒಂದು ಭಾಷೆಯಲ್ಲಿ ಆಯಾ ಭಾಷಿಕರಿಂದ ಆಯಾ ಭಾಷಾ ಮೂಲದಿಂದ ಹುಟ್ಟಿದ ಪದಗಳನ್ನು ದೇಶ್ಯಪದಗಳು ಎನ್ನುತ್ತೇವೆ. ಇದಕ್ಕೆ ವಿರುದ್ಧವಾದ ಅಥವಾ ಇದಕ್ಕಿಂತ ಭಿನ್ನವಾದ ರೀತಿಯಲ್ಲಿ ಮುಖ್ಯವಾಗಿ ಬೇರೆ ಭಾಷೆಯಿಂದ ಎರವಲಾಗಿ ಪಡೆದ ಪದಗಳನ್ನೇ ಅನ್ಯದೇಶ್ಯ ಪದಗಳು ಎಂದು ಕರೆಯುತ್ತೇವೆ. ಸಾಮಾನ್ಯವಾಗಿ ಯಾವುದೇ ಭಾಷೆಯಲ್ಲೂ ಅನ್ಯಭಾಷೆಯ ಪದಗಳು ದೊರೆಯುತ್ತವೆ. ಬೇರೆ ಬೇರೆ ಭಾಷೆಯನ್ನು ಆಡುವ ಜನಸಮುದಾಯ ಒಟ್ಟಿಗೆ ಬದುಕುವ ಬಾಳುವ ಅನಿವಾರ್ಯ ಸಂದರ್ಭದಲ್ಲಿ ಇಂತಹ ಭಾಷಿಕ ಕೊಳು ಕೊಡುಗೆ ನಡೆದೇ ನಡೆಯುತ್ತದೆ. ಪ್ರಸ್ತುತ ಕನ್ನಡದಲ್ಲಿಯೂ ಅನೇಕ ಅನ್ಯದೇಶ್ಯ ಪದಗಳು ಲಭ್ಯವಾಗುತ್ತವೆ.

ಕನ್ನಡ ಭಾಷೆಯಲ್ಲಿ ಮುಖ್ಯವಾಗಿ ಮತ್ತು ಹೆಚ್ಚಾಗಿ ಸಂಸ್ಕೃತ ಭಾಷೆಯ ಪದಗಳಿವೆ. ಸಂಸ್ಕೃತವಲ್ಲದೆ ಅರಬ್ಬಿ, ಪಾರಸಿ, ಹಿಂದೂಸ್ತಾನಿ, ಪೋರ್ಚುಗೀಸ್, ಗ್ರೀಕ್, ಭಾಷೆಯ ಪದಗಳು ಕನ್ನಡದಲ್ಲಿವೆ. ಬಹುಮುಖ್ಯವಾಗಿ ಇಂದಿನ ಕನ್ನಡ ಭಾಷೆಯಲ್ಲಿ ಹೇರಳವಾಗಿ ಇಂಗ್ಲಿಷ್ ಭಾಷೆಯ ಪದಗಳು ಸೇರಿಕೊಂಡಿವೆ. ಅನ್ಯದೇಶ್ಯಗಳು ಎಂದಾಗ ಪ್ರಮಾಣ ಮತ್ತು ಬಳಕೆಯ ದೃಷ್ಟಿಯಿಂದ ಸಂಸ್ಕೃತ ಮತ್ತು ಇಂಗ್ಲಿಷ್ ಪದಗಳು ಕನ್ನಡದಲ್ಲಿ ಹೆಚ್ಚು ಪ್ರಚುರವಾಗಿವೆ ಎಂದೇ ಹೇಳಬೇಕು.

ಅನ್ಯದೇಶ್ಯ ಪದಗಳು ಎಷ್ಟೋ ವೇಳೆ ಅನ್ಯದೇಶ್ಯವೆಂದು ಗಮನಕ್ಕೆ ಬಾರದ ರೀತಿಯಲ್ಲಿ ಅದು ಆ ಭಾಷೆಯ ಪದವೇ ಎನ್ನುವ ಹಾಗೆ ಸರಾಗವಾಗಿ ಪ್ರಯೋಗವಾಗುತ್ತವೆ. ಇದೊಂದು ವಿಶಿಷ್ಟವಾದ ಗಮನಾರ್ಹ ಅಂಶ. ಎಲ್ಲ ಭಾಷೆಗಳಲ್ಲೂ ಹೀಗಾಗುವುದುಂಟು.

ಅನ್ಯಭಾಷೆಯಿಂದ ಪಡೆದ ಈ ಪದಗಳನ್ನು ಎರವಲು ಪದಗಳು (Loan words) ಎಂತಲೂ ಈ ಪ್ರಕ್ರಿಯೆಯನ್ನು ಭಾಷಾ ಸ್ವೀಕರಣ ಎಂತಲೂ ಕರೆಯಲಾಗುತ್ತದೆ. ಹೀಗೆ ಭಾಷಾ ಸ್ವೀಕರಣ ಆದ ಸಂದರ್ಭದಲ್ಲಿ. ಒಂದು ಭಾಷೆಯ ಪದ ಮತ್ತೊಂದು ಭಾಷೆಯಲ್ಲಿ ಯಾವುದೇ ರೂಪ ಮತ್ತು ಅರ್ಥ ವ್ಯತ್ಯಾಸವನ್ನು ಪಡೆಯದೆ ಪ್ರಯೋಗಗೊಂಡರೆ ಅದು **'ಸ್ವೀಕೃತಪದ'** ; ಒಂದು ಭಾಷೆಯ ಪದ ಅನ್ಯಭಾಷೆಯ ಅರ್ಥಕ್ಕೆ ಅನುಗುಣವಾಗಿ ಪ್ರಯೋಗ ಗೊಂಡರೆ ಅದು **'ಶಬ್ದಾರ್ಥ ಸ್ವೀಕರಣ'** ; ಎರವಲಾಗಿ ಬಂದ ಪದ ಸ್ಥಳೀಯ ಭಾಷಾ ಶಬ್ದರೂಪಕ್ಕೆ ಹೊಂದುವಂತೆ ಮಾರ್ಪಡಿಸಿಕೊಂಡು ಪ್ರಯೋಗಗೊಂಡರೆ ಅದು **'ಸಂಯೋಜಿತ ಸ್ವೀಕರಣ'** ಎನಿಸಿಕೊಳ್ಳುತ್ತದೆ.

ತತ್ಸಮ ಕನ್ನಡ ಶಬ್ದಕೋಶವನ್ನು ತತ್ಸಮ, ತದ್ಭವ, ದೇಶ್ಯ ಮತ್ತು ಅನ್ಯದೇಶ್ಯ ಎಂದು ನಾಲ್ಕು ವಿಧವಾಗಿ ವಿಂಗಡಿಸಿಕೊಂಡು ನೋಡಲಾಗುತ್ತದೆ.

## 4.3.1. ತತ್ಸಮ ಪದಗಳು

ತತ್ಸಮ ಎಂದರೆ ಸಂಸ್ಕೃತಕ್ಕೂ ಕನ್ನಡಕ್ಕೂ ಸಮಾನವಾದ ರೂಪದ ಶಬ್ದ ಎಂದು ಅರ್ಥ. ಕೇಶಿರಾಜನೂ ಹೀಗೆ ಹೇಳುತ್ತಾನೆ. ಆದರೂ ರೂಢಿಯಲ್ಲಿ ಈ ಅರ್ಥವನ್ನು ತೆಗೆದುಕೊಂಡಿಲ್ಲ. ಸಂಸ್ಕೃತ ಶಬ್ದಗಳು ಅತ್ಯಲ್ಪ ಬದಲಾವಣೆಯೊಡನೆ ಕನ್ನಡಕ್ಕೆ ಬರುವುದನ್ನು ತತ್ಸಮ ಎಂದು ಕರೆಯುವುದೇ ಹೆಚ್ಚಾಗಿ ವಾಡಿಕೆಯಲ್ಲಿದೆ. ಕನ್ನಡಕ್ಕೆ ಬಂದಿರುವ ತತ್ಸಮಗಳನ್ನು ಲೆಕ್ಕಮಾಡುವುದು ಸಾಧ್ಯವೇ ಇಲ್ಲ. ಕನ್ನಡ ಗ್ರಂಥಗಳಲ್ಲಿ ಕಂಡುಬರುವ ಭಾಷೆಯು ಸಂಸ್ಕೃತ ಶಬ್ದಗಳಿಂದ ಕೂಡಿರುತ್ತದೆ. ಅಷ್ಟೇ ಅಲ್ಲ ಸಂಸ್ಕೃತ ಶಬ್ದಗಳನ್ನು ಬಿಟ್ಟು ಅಚ್ಚಕನ್ನಡದಲ್ಲಿ ಬರೆಯುತ್ತೇನೆಂದು ನಿರ್ಧರಿಸಿದರೂ ಬರೆಯುವುದು ಸಾಧ್ಯವಾಗುವುದಿಲ್ಲ. ಒಂದು ಪಕ್ಷ ಬರೆದರೂ ಆಧುನಿಕರಿಗೆ ಅರ್ಥವಾಗುವುದಿಲ್ಲ. ಆದ್ದರಿಂದ ತತ್ಸಮಗಳನ್ನು ಕುರಿತು ತಿಳಿದುಕೊಳ್ಳುವಾಗ ಯಾವ ಯಾವ ಬದಲಾವಣೆಗಳೊಡನೆ ಕನ್ನಡಕ್ಕೆ ಬಂದಿವೆ ಎಂಬುದನ್ನು ಗಮನಿಸಬೇಕು. ಕೆಲವು ಸಲ ಅನೇಕರು ಕನ್ನಡ ಶಬ್ದಗಳೆಂದೇ ಗುರುತಿಸುವ ಸಂಸ್ಕೃತ ಶಬ್ದಗಳೂ ಎದುರಾಗುತ್ತವೆ. ಈಗ ಒಂದೊಂದು ವಿಧದ ನಿಯಮದ ಅನುಸಾರವಾಗಿ ಕನ್ನಡಕ್ಕೆ ಬಂದಿರುವ ಸಂಸ್ಕೃತ ಶಬ್ದಗಳನ್ನು ನೋಡೋಣ :

ಆ,ಈ,ಊ ಸ್ವರಗಳಿಂದ ಅಂತ್ಯವಾಗುವ ಸಂಸ್ಕೃತ ಶಬ್ದಗಳು ಕನ್ನಡಕ್ಕೆ ಬರುವಾಗ ದೀರ್ಘವನ್ನು ಕಳೆದುಕೊಂಡು ಹ್ರಸ್ವವಾಗುವುವು. ಕೆಲವು ಶಬ್ದಗಳು 'ಎ' ಕಾರವನ್ನು ಪಡೆದುಕೊಳ್ಳುವುವು.

ಉದಾ :

| | | | | | |
|---|---|---|---|---|---|
| ದಯಾ | X | ದಯೆ, ದಯ | ನಾರೀ | X | ನಾರಿ |
| ವಧೂ | X | ವಧು | ಸರಯೂ | X | ಸರಯು |
| ಸ್ವಯಂಭೂ | X | ಸ್ವಯಂಭು | ಸೀತಾ | X | ಸೀತೆ |
| ಲೀಲಾ | X | ಲೀಲೆ | ಬಾಲಾ | X | ಬಾಲೆ |
| ಶಾಲಾ | X | ಶಾಲೆ | ಶಮಾ | X | ಶಮೆ |
| ಅಭಿಲಾಷಾ | X | ಅಭಿಲಾಷೆ | ಸರಸ್ವತೀ | X | ಸರಸ್ವತಿ |
| ಲಕ್ಷ್ಮೀ | X | ಲಕ್ಷ್ಮಿ | ಗೌರೀ | X | ಗೌರಿ |
| ಕಾವೇರೀ | X | ಕಾವೇರಿ | ದ್ರೌಪದೀ | X | ದ್ರೌಪದಿ |
| ದಮಾ | X | ದಮೆ | ಕ್ಷಮಾ | X | ಕ್ಷಮೆ |
| ಭಾಷಾ | X | ಭಾಷೆ | ಗ್ರೀವಾ | X | ಗ್ರೀವ, ಗ್ರೀವೆ |
| ವಾಲುಕಾ | X | ವಾಲುಕ | ರೇಖಾ | X | ರೇಖ, ರೇಖೆ. |

ಸಂಸ್ಕೃತ ಶಬ್ದಾಂತ್ಯದಲ್ಲಿ 'ಋ' ಕಾರವಿದ್ದರೆ, ಕನ್ನಡಕ್ಕೆ ಬರುವಾಗ 'ಅ, ಅರ' ಎಂಬ ವ್ಯತ್ಯಾಸವನ್ನು ಹೊಂದುತ್ತವೆ. ಕೆಲವು ಶಬ್ದಗಳು 'ಎ' ಕಾರಾಂತವಾಗಿರುತ್ತದೆ.

| | | | | | |
|---|---|---|---|---|---|
| ಕರ್ತೃ | X | ಕರ್ತ, ಕರ್ತಾರ | ಸವಿತೃ | X | ಸವಿತಾರ |
| ದಾತೃ | X | ದಾತ, ದಾತರ | ಭರ್ತೃ | X | ಭರ್ತಾರ |
| ಪಿತೃ | X | ಪಿತ | ಹೋತೃ | X | ಹೋತಾರ |
| ಮಾತೃ | X | ಮಾತೆ | ಮಾಂಧಾತೃ | X | ಮಾಂಧಾತ |
| ನೇತೃ | X | ನೇತಾರ | | | |

ಸಂಸ್ಕೃತ ಶಬ್ದಗಳಲ್ಲಿ ಬರುವ 'ನ್' ಅಂತ್ಯಾಕ್ಷರವು ಕನ್ನಡದಲ್ಲಿ ಲೋಪವಾಗುತ್ತದೆ.

| | | | | | |
|---|---|---|---|---|---|
| ರಾಜನ್ | X | ರಾಜ | ಬ್ರಹ್ಮನ್ | X | ಬ್ರಹ್ಮ |
| ಕರಿನ್ | X | ಕರಿ | ಯುವನ್ | X | ಯುವ |
| ಆತ್ಮನ್ | X | ಆತ್ಮ | ಮೂರ್ಧನ್ | X | ಮೂರ್ಧ |
| ಧಾಮನ್ | X | ಧಾಮ | ಕರ್ಮನ್ | X | ಕರ್ಮ |
| ಪೂಷನ್ | X | ಪೂಷ | ಅಧ್ವನ್ | X | ಅಧ್ವ |

ವ್ಯಂಜನಾಂತ ಶಬ್ದಗಳು ಕನ್ನಡಕ್ಕೆ ಬರುವಾಗ ಅಂತ್ಯವ್ಯಂಜನವನ್ನು ಕಳೆದುಕೊಳ್ಳುವುದು ಕಂಡುಬರುತ್ತದೆ ಮತ್ತು ಕೆಲವುಸಲ ಅಂತ್ಯವ್ಯಂಜನದೊಡನೆ 'ಉ'ಕಾರವು ಸೇರಿ ದ್ವಿತ್ವವಾಗುವುದೂ ಉಂಟು.

| | | | | | |
|---|---|---|---|---|---|
| ಧನುಸ್ | X | ಧನು, ಧನಸ್ಸು | ಪ್ರತಿಪತ್ | X | ಪ್ರತಿಪತ್ತು |
| ಶಿರಸ್ | X | ಶಿರ, ಯಶಸ್ಸು | ಕ್ಷುತ್ | X | ಕ್ಷುತ್ತು |
| ಯಶಸ್ | X | ಯಶ, ಯಶಸ್ಸು | ಸಂಪತ್ | X | ಸಂಪತ್ತು |
| ಮನಸ್ | X | ಮನ, ತೇಜಸ್ಸು | ವಿಯತ್ | X | ವಿಯತ್ತು |
| ತೇಜಸ್ | X | ತೇಜ, ತೇಜಸ್ಸು | ವಿದ್ಯುತ್ | X | ವಿದ್ಯುತ್ತು |
| ಪಯಸ್ | X | ಪಯ, ಪಯಸ್ಸು | ದಿಕ್ | X | ದಿಕ್ಕು |
| ಶ್ರೇಯಸ್ | X | ಶ್ರೇಯ, ಶ್ರೇಯಸ್ಸು | ವಾಕ್ | X | ವಾಕ್ಕು |
| ತ್ವಕ್ | X | ತ್ವಕ್ಕು | | | |

ಕೆಲವು ವ್ಯಂಜನಾಂತ ಸಂಸ್ಕೃತ ಶಬ್ದಗಳು ಸ್ವರಾಂತಗಳಾಗಿ ಕನ್ನಡಕ್ಕೆ ಬರುತ್ತವೆ

| | | | | | |
|---|---|---|---|---|---|
| ದಿವ್ | X | ದಿವ | ಸಂಪದ್ | X | ಸಂಪದ |
| ಚತುರ್ | X | ಚತುರ | ಮರುತ್ | X | ಮರುತ |
| ಕಕುಭ್ | X | ಕಕುಭ | | | |
| ವೇದವಿದ್ | X | ವೇದವಿದ | | | |

ಕೆಲವು ಸಂಸ್ಕೃತ ಶಬ್ದಗಳು ವಿಸರ್ಗದಿಂದ ಕೂಡಿ ಬಹುವಚನದಲ್ಲಿದ್ದು, ಕನ್ನಡಕ್ಕೆ ಬಂದಾಗ ವಿಸರ್ಗವನ್ನು ಕಳೆದುಕೊಂಡು ಏಕವಚನ ಶಬ್ದಗಳಾಗುತ್ತವೆ.

| | | | | | |
|---|---|---|---|---|---|
| ವಿದ್ವಾಂಸಃ | X | ವಿದ್ವಾಂಸ | ಭಗವಂತಃ | X | ಭಗವಂತ |
| ಹನುಮಂತಃ | X | ಹನುಮಂತ | ಶ್ರೀಮಂತಃ | X | ಶ್ರೀಮಂತ |
| ಶ್ವಾನಃ | X | ಶ್ವಾನ | | | |

### 4.3.2. ತದ್ಭವ ಪದಗಳು

ಮೇಲೆ ನೋಡಿದ ಶಬ್ದಗಳು ಅತ್ಯಂತ ಕಡಿಮೆ ವ್ಯತ್ಯಾಸವನ್ನು ಹೊಂದಿ ಕನ್ನಡಕ್ಕೆ ಬಂದು ಸೇರಿಕೊಂಡಿರುವುದು ಸ್ಪಷ್ಟವಾಗಿದೆ. ಎಷ್ಟು ಕಡಿಮೆ ವ್ಯತ್ಯಾಸವೆಂದರೆ ಅದನ್ನು ವ್ಯತ್ಯಾಸವೆಂದು ಗುರುತಿಸ ಬೇಕಾಗಿಲ್ಲ ಎನ್ನುವಷ್ಟು. ಅದ್ದರಿಂದಲೇ ಅವುಗಳನ್ನು ತತ್ಸಮ ಎನ್ನಲಾಯಿತು. ಇನ್ನು ಗಮನಾರ್ಹ ವ್ಯತ್ಯಾಸಗಳಿಂದ ಕೂಡಿ ಕನ್ನಡಕ್ಕೆ ಬಂದ ಶಬ್ದಗಳು ತದ್ಭವಗಳು ಎನ್ನಿಸಿಕೊಳ್ಳುತ್ತವೆ. ಹೀಗೆ ತದ್ಭವಗಳಾಗಿ ಶಬ್ದಗಳೆಲ್ಲವೂ ಸಾಧಾರಣವಾಗಿ ವ್ಯವಹಾರದಲ್ಲಿ ಕಂಡುಬರುವುದಿಲ್ಲ. ಕೆಲವು ತುಂಬಾ ಸಹಜವೆಂಬಂತೆ, ಮೂಲಕನ್ನಡ ಶಬ್ದಗಳೆಂಬಂತೆ ರೂಢಿಯಲ್ಲಿವೆ. ಕೆಲವು ಶಬ್ದಕೋಶಗಳಲ್ಲಿ ಮಾತ್ರ ಕಂಡುಬರುತ್ತವೆ.

ನಿತ್ಯ ಬಳಕೆಯಲ್ಲಿರುವ ತದ್ಭವಗಳು

| | | | | | |
|---|---|---|---|---|---|
| ಯಾತ್ರಾ | X | ಜಾತ್ರೆ | ವೈಶಾಖ | X | ಬೇಸಿಗೆ |
| ಯೋಗಿನ್ | X | ಜೋಗಿ | ವೀಥಿ | X | ಬೀದಿ |
| ಸಂಧ್ಯಾ | X | ಸಂಜೆ | ಗ್ರಂಥಿ | X | ಗಂಟು |
| ದ್ಯೂತ | X | ಜೂಜು | ಪಾದುಕಾ | X | ಹಾವುಗೆ |
| ಮಲ್ಲಿಕಾ | X | ಮಲ್ಲಿಗೆ | ವಲ್ಲಿ | X | ಬಳ್ಳಿ |
| ಸೂಚಿ | X | ಸೂಜಿ | ವರ್ತಿ | X | ಬತ್ತಿ |
| ವಚಾ | X | ಬಜೆ | ಕರ್ತರಿ | X | ಕತ್ತರಿ |
| ಕಟಕ | X | ಕಡಗ | ಶರ್ಕರಾ | X | ಸಕ್ಕರೆ |
| ಅಟವಿ | X | ಅಡವಿ | ಅರ್ಕ | X | ಎಕ್ಕ |

| | | | | | |
|---|---|---|---|---|---|
| ತಟಿ | X | ದಡ | ದ್ರೋಣಿ | X | ದೋಣಿ |
| ವಸತಿ | X | ಬಸದಿ | ಸೂತ್ರಿಕಾ | X | ಸುತ್ತಿಗೆ |
| ಭೂತಿ | X | ಬೂದಿ | ವೃಷಭ | X | ಬಸವ |
| ಘಂಟಾ | X | ಗಂಟೆ | ಕಾಂಸ್ಯ | X | ಕಂಚು |
| ಘೂಕ | X | ಗೂಗೆ | ಕುಸ್ತುಂಬರ | X | ಕೊತ್ತಂಬರಿ |
| ಜಟಾ | X | ಜಡೆ | ಆರ್ಯ | X | ಅಜ್ಜ |
| ಮರೀಚ | X | ಮೆಣಸು | ಜೀರಿಕಾ | X | ಜೀರಿಗೆ |
| ಕುಕ್ಕುಟ | X | ಕೋಳಿ | ಕಂಬಲ | X | ಕಂಬಳಿ |
| ಪಿಷ್ಟ | X | ಹಿಟ್ಟು | ಕುದ್ದಾಲ | X | ಗುದ್ದಲಿ |
| ಇಷ್ಟಿಕಾ | X | ಇಟ್ಟಿಗೆ | ಪ್ರಗ್ರಹ | X | ಹಗ್ಗ |
| ಕೂಷ್ಮಾಂಡ | X | ಕುಂಬಳ | ವರ್ಧಕಿ | X | ಬಡಗಿ |
| ದಾಡಿಮ | X | ದಾಳಿಂಬೆ | ಕಾಷ್ಠ | X | ಕಡ್ಡಿ |
| ದೀಪಾವಳಿಕಾ | X | ದೀವಳಿಗೆ | ಮರುವಕ | X | ಮರುಗ |
| | | | ಕ್ಷೀರಾಗಾರ | X | ಕೀಲಾರ |

ಮೇಲೆ ನೋಡಿದ ಶಬ್ದಗಳ ಬಗ್ಗೆ ಒಂದು ಅನುಮಾನ ಮೂಡುತ್ತದೆ. ನಾವು ಸಂಸ್ಕೃತದಿಂದ ಕನ್ನಡಕ್ಕೆ ಬಂದ ಶಬ್ದಗಳೆಂದು ಭಾವಿಸುವ ಶಬ್ದಗಳಲ್ಲಿ ತೀರಾ ಸಾಮಾನ್ಯವಾದುವೂ ಇದೆ, ದಿನ ಬಳಕೆಯ ವಸ್ತುಗಳ ಹೆಸರುಗಳೂ ಸೇರಿವೆ, ಇಷ್ಟು ಸಾಮಾನ್ಯ ಶಬ್ದಗಳನ್ನು ಕನ್ನಡಿಗರು ಸಂಸ್ಕೃತದಿಂದಲೇ ಸ್ವೀಕರಿಸುವ ಅಗತ್ಯವಿತ್ತೆ, ಅಲ್ಲಿಯವರೆಗೆ ಹೆಸರು ಕೊಡದೆ ವಸ್ತುವನ್ನು ಬಳಸುತ್ತಿದ್ದರೆ ಎಂಬ ಪ್ರಶ್ನೆಗಳು ಹುಟ್ಟುತ್ತವೆ. ಒಂದು ಪಕ್ಷ ಈ ತದ್ಭವ ಶಬ್ದಗಳು ತದ್ಭವಗಳಾಗಿರದೆ ಅಚ್ಚಕನ್ನಡ ಶಬ್ದಗಳೇ ಆಗಿದ್ದು ಸಂಸ್ಕೃತ ಭಾಷೆಗೆ ಸೇರ್ಪಡೆಯಾಗಿರಬಹುದು. ಎರಡು ಭಾಷೆಗಳ ಒಡನಾಟದಲ್ಲಿ ಪರಸ್ಪರ ಸ್ವೀಕರಿಸುವ ಪ್ರಕ್ರಿಯೆಯು ನಡೆದಿದ್ದರೆ ಆಶ್ಚರ್ಯವೇನೂ ಇಲ್ಲ. ಜಾತ್ರೆ, ಜೋಗಿ, ಮಲ್ಲಿಗೆ, ಬೂದಿ, ಕೋಳಿ, ಬಳ್ಳಿ, ಬೀದಿ, ದೋಣಿ, ಎಕ್ಕ, ಹಗ್ಗ ಮೆಣಸು, ಕುಂಬಳ, ಕಡ್ಡಿ ಮುಂತಾದ ಶಬ್ದಗಳನ್ನು ಕನ್ನಡದ ದೇಶ್ಯ ಶಬ್ದಗಳೆಂದು ಭಾವಿಸಿದರೆ ತಪ್ಪಾಗಲಾರದು.

ಕೆಲವು ತದ್ಭವಗಳು ಕವಿಗಳಿಂದ ಸೃಷ್ಟಿಯಾಗಿರಬೇಕು. ಹಳಗನ್ನಡ ಕವಿಗಳು ಚಂಪೂ ಕಾವ್ಯಗಳನ್ನು ರಚಿಸುವಾಗ, ನಡುಗನ್ನಡ ಕವಿಗಳು ಷಟ್ಪದಿ ಕಾವ್ಯಗಳನ್ನು ರಚಿಸುವಾಗ ಸಂದರ್ಭೋಚಿತವಾಗಿ, ಪ್ರಾಸಕ್ಕೋ ಪಾದಪೂರಣಕ್ಕೋ, ವೈಶಿಷ್ಟ್ಯಕ್ಕೋ ಸಂಸ್ಕೃತ ಶಬ್ದಗಳನ್ನು ತದ್ಭವರೂಪಕ್ಕೆ ಪರಿವರ್ತಿಸಿ ಬಳಸಿಕೊಂಡಿರಬಹುದು. ಏಕೆಂದರೆ ಆ ಶಬ್ದಗಳು ಜನರ ಬಳಕೆಗೆ ಸಂದಂತೆ ಕಾಣುವುದಿಲ್ಲ. ಸಾಮಾನ್ಯರು ಅಷ್ಟು ಕಷ್ಟಪಟ್ಟು ಬಳಸುವುದೂ ಸಾಧ್ಯವಿಲ್ಲ. ಅಂತಹ ಕೆಲವು ತದ್ಭವಗಳನ್ನು ನೋಡಿ-

| | | | | | |
|---|---|---|---|---|---|
| ವಂಚನೆ | X | ಬಂಚನೆ | ವ್ಯಾಘ್ರ | X | ಬಗ್ಗ |
| ಪಿಶುನ | X | ಹಿಸುಣು | ಪ್ರಜ್ವಲ | X | ಪಜ್ಜಳ |
| ಪತಿವ್ರತೆ | X | ಹದಿಬದೆ | ಮೃತ್ಯು | X | ಮಿಳ್ತು |
| ಉದ್ಯೋಗ | X | ಉಜ್ಜುಗ | ಸರ್ವ | X | ಸಬ್ಬ |
| ಋಷಿ | X | ರಿಸಿ | ತ್ರಿವಳಿ | X | ತಿವಳಿ |
| ಭೃಂಗಾರ | X | ಬಿಂಗಾರ | ತ್ರಿಗುಣ | X | ತಿಗುಣ |
| ಸಾಹಸ | X | ಸಾಸ | ಏಕಸರ | X | ಎಕ್ಕಸರ |
| ಅಮೃತ | X | ಅಮರ್ದು | | | |
| ಕಲಮಾ | X | ಕಳವೆ | | | |

ಇವುಗಳನ್ನು ನೋಡಿದರೆ ಜನರು ಉಚ್ಚರಿಸಲಾರದೆ ಭ್ರಷ್ಟಗೊಳಿಸಿ ಉಚ್ಚರಿಸುತ್ತಿದ್ದರು ಎಂಬ ಭಾವನೆ ಮೂಡುವುದಿಲ್ಲ. ಕವಿಗಳೇ ರೂಪಿಸಿಕೊಂಡು ಪ್ರಯೋಗಿಸಿರಬಹುದು. ಉಜ್ಜುಗ, ಪಜ್ಜಳ ಮುಂತಾದ ಶಬ್ದಗಳು ಕೋಶಗಳಲ್ಲಿ ಸೇರಿಹೋಗಿವೆ.

### 3.3.2 ಸಂಸ್ಕೃತ ಸಮಾಸ ಶಬ್ದಗಳು

ಕನ್ನಡ ಶಬ್ದಕೋಶಕ್ಕೆ ಸಂಸ್ಕೃತ-ಸಂಸ್ಕೃತ ಸಮಾಸ ಶಬ್ದಗಳು ಸೇರಿರುವುದನ್ನು ನೋಡುತ್ತೇವೆ. ಈ ಶಬ್ದಗಳು ಸಾಂಸ್ಕೃತಿಕ ಸಾಹಿತ್ಯಕ ಚಟುವಟಿಕೆಗಳ ಸಂದರ್ಭದಲ್ಲಿ ಬಳಸಲ್ಪಡುತ್ತವೆ. ಇವುಗಳನ್ನು ಬಿಟ್ಟು ಮಾತನಾಡುವುದು ಸಾಧ್ಯವಿಲ್ಲ ಎನ್ನುವಷ್ಟು ಅನಿವಾರ್ಯ ಶಬ್ದಗಳಾಗಿವೆ. ಉದಾಹರಣೆಗೆ :

ಉತ್ತಮೋತ್ತಮ, ದೇವಮಂದಿರ, ಧನರಕ್ಷಣೆ, ವಯೋವೃದ್ಧ

ಶ್ವೇತಚ್ಛತ್ರ, ನೀಲೋತ್ಪಲ, ಪೀತವಸ್ತ್ರ, ಪೀತಾಂಬರ, ದಿವ್ಯಪ್ರಕಾಶ.

ಮುಖಕಮಲ, ಕರಕಮಲ, ಫಲಾಹಾರ, ಸುಖಜೀವನ, ಚಕ್ರಾಯುಧ

ಪಂಚೇಂದ್ರಿಯ, ದಶಮುಖ, ತ್ರಿನೇತ್ರ, ಸಪ್ತಸ್ವರ, ಪಂಚವಟಿ

ಗಿರಿವನದುರ್ಗ, ಸೂರ್ಯಚಂದ್ರ ನಕ್ಷತ್ರ, ಕರಿತುರಗರಥ

ಚಕ್ರಪಾಣಿ, ಫಾಲನೇತ್ರ, ಇಕ್ಷುಕೋದಂಡ, ಇತ್ಯಾದಿ.

ಸಂಸ್ಕೃತದಿಂದ ಕನ್ನಡ ಹುಟ್ಟದೆ ಇದ್ದರೂ ಕನ್ನಡ ಭಾಷೆ ಮತ್ತು ಸಾಹಿತ್ಯಗಳನ್ನು ಸಂಸ್ಕೃತ ಸಾಕುತಾಯಿಯಂತೆ ವಿಶೇಷವಾಗಿ ಪೋಷಿಸಿರುವುದು ಕಂಡುಬರುತ್ತದೆ. ಸಂಸ್ಕೃತದ ಹಿನ್ನೆಲೆ, ಪೋಷಣೆ ಇಲ್ಲದೆ ಇದ್ದಿದ್ದರೆ ಕನ್ನಡ ಸಾಹಿತ್ಯ ಈಗ ಇರುವಷ್ಟು ಪ್ರಬುದ್ಧವಾಗಿ ಇರಲು ಸಾಧ್ಯವಾಗುತ್ತಿರಲಿಲ್ಲ ಎಂದರೆ ತಪ್ಪಾಗಲಾರದು.

### 4.3.3. ಇಂಗ್ಲಿಷ್ ಶಬ್ದಗಳು

ಕನ್ನಡ ಶಬ್ದಕೋಶದಲ್ಲಿ ಇರುವ ಅನ್ಯದೇಶ್ಯಗಳ ಪೈಕಿ ಸಂಸ್ಕೃತವನ್ನು ಬಿಟ್ಟರೆ ಇಂಗ್ಲಿಷ್ ಮೂಲದ ಶಬ್ದಗಳು ಇತರ ಭಾಷೆಯ ಶಬ್ದಗಳಿಗಿಂತ ಹೆಚ್ಚಿನ ಸಂಖ್ಯೆಯಲ್ಲಿವೆ. ಸುಮಾರು ಎರಡು ಶತಮಾನಕಾಲ ಇಂಗ್ಲಿಷರು ಭಾರತವನ್ನು ಆಳಿದರು. ಮೆಕಾಲೆಯ ಪ್ರಯತ್ನದಿಂದ ಇಂಗ್ಲಿಷ್ ಕಲಿಕೆಯು ಹತ್ತೊಂಬತ್ತನೆ ಶತಮಾನದ ಆದಿಭಾಗದಲ್ಲಿ ಪ್ರಾರಂಭವಾಯಿತು, ಜನಸಾಮಾನ್ಯರು ಇಂಗ್ಲಿಷಿನಲ್ಲಿ ವ್ಯವಹರಿಸದಿದ್ದರೂ ಇಂಗ್ಲಿಷ್ ಶಬ್ದಗಳು ವ್ಯಾಪಕವಾಗಿ ಆಡುಭಾಷೆಗೂ ಸೇರತೊಡಗಿದುವು. ವಿದ್ಯಾವಂತರ ಬಾಯಿಯಲ್ಲಿ ಶಿಷ್ಟರೂಪದಲ್ಲಿ ಕೇಳಿಬರುವ ಇಂಗ್ಲಿಷ್ ಶಬ್ದಗಳು ಅಶಿಕ್ಷಿತರ ಬಾಯಿಯಲ್ಲಿ ಇಂಗ್ಲಿಷಿನ ತದ್ಭವಗಳು ಎನ್ನಬಹುದಾದ ಶಬ್ದರೂಪಗಳು ಹೊರಬರಲು ಪ್ರಾರಂಭವಾಯಿತು. ಒಟ್ಟಾರೆ ಕನ್ನಡಿಗರ ಬಾಯಿಯಿಂದ ಅನೈಚ್ಛಿಕವಾಗಿ ಕನ್ನಡದ ಜೊತೆಗೆ ಇಂಗ್ಲಿಷ್ ಶಬ್ದಗಳು ಕನ್ನಡೀಕರಣಗೊಂಡು ಹೊರಬಂದು ಪ್ರಚಾರವಾಗತೊಡಗಿದವು. ಹೀಗೆ ಕನ್ನಡಕ್ಕೆ ಬಂದ ಇಂಗ್ಲಿಷ್ ಶಬ್ದಗಳನ್ನು ಸುಮಾರು ಐದು ವಿಧವಾಗಿ ವಿಂಗಡಿಸಬಹುದು. ಇಂಗ್ಲಿಷ್ ತತ್ಸಮಗಳು, ಇಂಗ್ಲಿಷಿನ ಶಬ್ದದ ಅರ್ಥವನ್ನು ಕೊಡುವ ಕನ್ನಡ (ಸಂಸ್ಕೃತ) ಶಬ್ದಗಳು, ವಿವರಣಾತ್ಮಕವಾದ ಶಬ್ದಗಳು, ಭಾಷಾಂತರಗೊಂಡ ಶಬ್ದಗಳು, ಇಂಗ್ಲಿಷ್ ತದ್ಭವಗಳು. ಇವುಗಳೇ ಬೇರೆ ಬೇರೆ ಗುಂಪಿಗೆ ಸೇರುವ ಸ್ವೀಕೃತ ಶಬ್ದಗಳು.

**ಇಂಗ್ಲಿಷ್ ತತ್ಸಮಗಳು**

ಸಂಸ್ಕೃತ ಶಬ್ದಗಳಲ್ಲಿ ಹೆಚ್ಚು ವ್ಯತ್ಯಾಸವಿಲ್ಲದೆ ಕನ್ನಡಕ್ಕೆ ಬಂದವುಗಳನ್ನು ಹೇಗೆ ನಾವು ತತ್ಸಮಗಳು ಎನ್ನುತ್ತೇವೆಯೋ ಹಾಗೆಯೇ ಇಂಗ್ಲಿಷ್ ಶಬ್ದಗಳನ್ನೂ ತತ್ಸಮಗಳೆಂದು ಹೊಸ ಪರಿಭಾಷೆಯಲ್ಲಿ ಕರೆಯಬಹುದು. ನಾವು ಮಾತನಾಡುವ ಕನ್ನಡದಲ್ಲಿ ಇಂಗ್ಲಿಷ್ ಶಬ್ದಗಳು ಇರುವುದು ಅನಿವಾರ್ಯವಾಗಿಬಿಟ್ಟಿದೆ. ಮೊದಲು ಇಂಗ್ಲಿಷ್ ತತ್ಸಮಗಳಾವುವು ಎಂಬುದನ್ನು ನೋಡೋಣ. ಸಂಸ್ಕೃತ ತತ್ಸಮಗಳಲ್ಲಿ ಹೇಗೆ ಅಲ್ಪ ಬದಲಾವಣೆಯನ್ನು ಮಾಡಿಕೊಂಡೆವೋ ಹಾಗೆ ಇಂಗ್ಲಿಷ್ ತತ್ಸಮಗಳನ್ನೂ ಅತ್ಯಲ್ಪ ಬದಲಾವಣೆಯೊಡನೆ ಸ್ವೀಕರಿಸಲಾಗಿದೆ. ಕೆಲವು ಏನೇನೂ ಬದಲಾವಣೆಯಿಲ್ಲದೆ ಲಿಪ್ಯಂತರ ಮಾತ್ರ ಆಗಿವೆ. ಉಳಿದ ಶಬ್ದಗಳು ಸ್ವರಾಂತವಾಗಿ ಬಂದಿವೆ. ಇವುಗಳು ಸಾಂಪ್ರದಾಯಿಕ ಶಬ್ದಕೋಶಗ್ರಂಥಗಳ ಒಳಕ್ಕೆ ಇನ್ನೂ ಪ್ರವೇಶ ಪಡೆದಿಲ್ಲ. ಜನರ ಮಾತಿನ ಭಂಡಾರದಲ್ಲಿ ತುಂಬಿವೆ.

- ಅಕಾಡಮಿ, ಅಮ್ಲೆಟ್. ಅಟ್ಲಾಸ್, ಬಜೆಟ್, ಕ್ರೇನ್, ಬಕೆಟ್, ಡ್ರೈವರ್. ಲಾರಿ. ಜಾಕ್, ಜರ್ಸಿ. ವೈರ್, ನಟ್, ಬೋಲ್ಟ್, ಸ್ಕ್ರೂಡ್ರೈವರ್, ಪ್ಯಾಂಟ್, ನಿಕ್ಕರ್, ಚೆಕ್, ಪೆನ್, ಪೆನ್ಸಿಲ್, ಕುಕರ್, ಸ್ಟೌವ್, ಪಿನ್, ಗ್ಯಾಸ್, ಕಿಲೊ, ಬೇಕರಿ. ಬೇಸಿನ್. ಸಿಂಕ್, ಸಂಪ್, ಮೋಟಾರ್, ಡಿಗ್ರಿ, ಡಿಕ್ರಿ, ರಿಟ್, ಕ್ಯಾನ್ಸರ್, ಅಪರೇಷನ್, ಸ್ಟೇ, ಕ್ಯಾರಟ್, ಬೀಟ್‌ರೂಟ್, ಟೊಮ್ಯಾಟೊ, ಸೈಕಲ್, ಕೇಬಲ್, ಸ್ಕೂಟರ್, ಟಿ.ವಿ, ರೇಡಿಯೊ, ಕ್ಯಾಸೆಟ್, ಕಂಪ್ಯೂಟರ್, ಟೆನಿಸ್, ಕ್ರಿಕೆಟ್,ವಾಲಿಬಾಲ್, ಫುಟ್‌ಬಾಲ್, ಬಿ.ಪಿ, ಕಟಿಂಗ್ ಪ್ಲೈಯರ್, ಪ್ಲಗ್, ಎಲ್ಬೊ, ಯೂನಿಯನ್, ಕಾಕ್, ಪೇಪರ್, ರಬ್ಬರ್. ಮೀಟರ್............

ಸ್ವರಾಂತ ಮಾಡಿಕೊಂಡು ಬಳಸುತ್ತಿರುವ ಶಬ್ದಗಳು : ಕಾರು, ಬಸ್ಸು ಪೋಸ್ಟು, ಗ್ರೇಡು, ಸೀಡು, ಟ್ಯಾಂಕು, ಬ್ಯಾಂಕು, ಬ್ಯಾಟು, ರೇಟು, ಕಾಲೇಜು ಸ್ಕೂಲು, ಪೆನ್ನು, ಪೆನ್ಸಿಲ್ಲು, ಸೋಪು, ಕ್ಯಾಪು, ಸೂಪು, ಟ್ರಂಕು, ರೈಲು, ಷಾಪು, ರೋಡು, ಟಾರು, ಕೇಕು, ಬಸ್ಸು, ರಸ್ಕು, ಪ್ಯಾಂಟು, ಷರ್ಟು, ಸಿಮೆಂಟು, ಗೇಟು, ಕಾಂಪೌಂಡು, ಸೈಟು, ಸ್ಕೇಲು, ಪೇಲು, ಫಾಲ್ಸು, ಜಿಪ್ಪು, ಬ್ಲೇಡು, ವೋಟು, ಸ್ಲೇಟು, ನರ್ಸು, ಸೀಟು, ಕಾರ್ಡು, ಕವರು, ಟ್ರಕ್ಕು, ರೂಮು, ಹೋಟೆಲು, ಹಾಸ್ಟಲು, ಫೋನು, ಫ್ಯಾನು, ಚೇರು, ಟೇಬಲ್ಲು, ಬನೀನು ಕ್ಲಾಂಪು, ಟಾರ್ಪಾಲು, ಪ್ಲೈಂಟು, ಬ್ರಷ್ಷು, ಲ್ಯಾಂಪು, ಗ್ಯಾಸು, ಪೆಟ್ರೋಲು,..........

ಈ ಶಬ್ದಗಳೂ ಕೂಡ ಶಬ್ದಕೋಶಗಳಿಗೆ ಇನ್ನೂ ಸೇರದೆ ಇದ್ದರೂ ವ್ಯವಹಾರದಲ್ಲಿ ಅನಿವಾರ್ಯವಾಗಿವೆ, ಅಗತ್ಯವಾಗಿವೆ.

**ವಿವರಣಾತ್ಮಕ ಶಬ್ದಗಳು**

ಇಂಗ್ಲಿಷ್ ಶಬ್ದಗಳನ್ನು ನೇರವಾಗಿ ಲಿಪ್ಯಂತರ ಮಾಡಿಕೊಳ್ಳದೆ ಅವುಗಳ ಉಪಯೋಗವನ್ನು ತಿಳಿದು, ವಿವರಣೆ ನೀಡುವ ಹಾಗೆ ತೋರುವ ಶಬ್ದಗಳನ್ನು ಸೃಷ್ಟಿಸಿಕೊಳ್ಳುವುದು. ಹಾಗೆ ಮಾಡುವಾಗ ನಮ್ಮಲ್ಲಿ ನಿತ್ಯವೂ ಬಳಕೆಯಲ್ಲಿರುವ ಶಬ್ದಗಳನ್ನೇ ಜೋಡಿ ಮಾಡಿ ಉಪಯೋಗಿಸಲಾಗಿದೆ. ಹಾಗೆ ಮಾಡುವಾಗ ಕನ್ನಡ ಮತ್ತು ಸ್ವೀಕೃತ ಸಂಸ್ಕೃತ ಶಬ್ದಗಳು ಒಂದೇ ಎಂಬ ದೃಷ್ಟಿಯಿಂದ ಬಳಸಿಕೊಳ್ಳಲಾಗಿದೆ.

- ಕಾಲು ಚೀಲ, ಕಲ್ಲಿದ್ದಲು, ಸೀಮೆಎಣ್ಣೆ, ಸೀಮೆಸುಣ್ಣ, ಸೀಮೆಹಸು, ಕೀಲೆಣ್ಣೆ, ಛಾಯಾಚಿತ್ರ, ಮೇಣದಬತ್ತಿ ಹೊಗೆ ಬಂಡಿ, ಉಪಗ್ರಹ, ಸಿಡಿಮದ್ದು, ಕಲ್ನಾರು, ಬಾನುಲಿ, ಚುಚ್ಚು ಮದ್ದು, ಶಸ್ತ್ರಚಿಕಿತ್ಸೆ, ಮತಪತ್ರ, ಜಲಾಂತರ್ಗಾಮಿ, ಕ್ಷಿಪಣಿ, ಅಗ್ನಿಪರ್ವತ, ಸಬಲೀಕರಣ, ಲಿಪ್ಯಂತರ, ಭಾಷಾಂತರ, ಸ್ಥಿತ್ಯಂತರ, ಹಣದುಬ್ಬರ, ಮನೋವಿಜ್ಞಾನ, ಸಮಾಜ ವಿಜ್ಞಾನ, ನ್ಯಾಯಾಲಯ, ಸಂಕೀರ್ಣ,............

**ಸಂವಾದಿ ಶಬ್ದಗಳು**

ವಿಜ್ಞಾನ ವಿಕಾಸಗೊಂಡು ತನ್ಮೂಲಕ ನಾಗರೀಕತೆಯು ಬೆಳೆದುಬಂದ ನಂತರ ಇಂಗ್ಲಿಷಿನ ವೈಜ್ಞಾನಿಕ ಪರಿಭಾಷೆಯನ್ನು ವಿದ್ಯಾವಂತರು ತಿಳಿದುಕೊಂಡನಂತರ ಕೆಲವು ಶಬ್ದಗಳನ್ನು ಕನ್ನಡಕ್ಕೆ ತೆಗೆದುಕೊಳ್ಳುವಾಗ ನಮ್ಮಲ್ಲಿ ಇದ್ದ ಕೆಲವು ಸಂವಾದಿ ಶಬ್ದಗಳನ್ನು ಬಳಸಿಕೊಳ್ಳಲಾಯಿತು. ಇದು ಭಾಷಾಂತರದ ಪ್ರಕ್ರಿಯೆಯಾಗಿರಲಿಲ್ಲ. ವಸ್ತು ಯಾವುದೆಂದು ನೋಡಿ ಅದನ್ನು ನಿರ್ದೇಶಿಸಲು ಸೂಕ್ತವಾದ ಶಬ್ದವನ್ನು ಶೋಧಿಸಿ ಬಳಸಿಕೊಳ್ಳಲಾಯಿತು.

- ಆಕಾಶವಾಣಿ, ಕ್ಷಿಪಣಿ, ವಿಮಾನ, ಉಪಗ್ರಹ, ಕಾದಂಬರಿ, ಕಾವ್ಯ ವಿಮರ್ಶೆ, ಘನ ವಸ್ತು, ರಾಶಿ, ಧ್ರುವ, ಹಡಗು, ಕೈಗಾರಿಕೆ, ಕರಕುಶಲ ಕಲೆ, ವಕೀಲ, ವೈದ್ಯ, ಉಲ್ಕೆ, ನಕ್ಷೆ(ನಕಾಶೆ), ಪಿಡಿ ಹುಣ್ಣು, ಸಂಧಿವಾತ, ಹೃದಯ ಸ್ತಂಭನ,..........

**ಭಾಷಾಂತರ ಕ್ರಿಯೆ**

ಕೆಲವು ಇಂಗ್ಲಿಷ್ ಜೋಡಿ ಶಬ್ದಗಳನ್ನು (ವಿಶೇಷವಾಗಿ ) ತದ್ವತ್ತಾಗಿ ಅನುವಾದ ಮಾಡಿ ಬಳಸಿಕೊಂಡಿರುವುದನ್ನು ನೋಡಬಹುದು. ಶಬ್ದಕ್ಕೆ ಶಬ್ದ ಎಂಬಂತೆ ಭಾಷಾಂತರ ಮಾಡಿಕೊಳ್ಳಲಾಗಿದೆ.

- ಸಣ್ಣಕಥೆ, ವೇಳಾಪಟ್ಟಿ, ವೃತ್ತಪತ್ರಿಕೆ, ಸೀಸದ ಕಡ್ಡಿ, ಒತ್ತು ಕಾಗದ, ಕಾರ್ಯಕಾರಿ ಸಮಿತಿ, ಕಾಲು ಚೆಂಡು, ಸೊಳ್ಳೆ ಪರದೆ, ಮುನ್ನುಡಿ, ಹಲ್ಲುಪುಡಿ, ತಡೆರಹಿತ, ಕಡ್ಡಿ ಪೆಟ್ಟಿಗೆ, ಗೃಹವಿಜ್ಞಾನ, ಮಸಿಕುಡಿಕೆ, ಮಾಯಾಲಾಂದ್ರ, ಕೊರಳ ಪಟ್ಟಿ, ಗೌರವಾಧ್ಯಕ್ಷ, ಪ್ರಧಾನ ಕಾರ್ಯದರ್ಶಿ, ಹಸಿರುಮನೆ ಪರಿಣಾಮ, ಪರಿಸರ ಮಾಲಿನ್ಯ, ವಾಯುಮಾಲಿನ್ಯ, ಜನಮಾಲಿನ್ಯ, ಗುಡಿಕೈಗಾರಿಕೆ, ಮಾತೃದ್ರವ, ಗಾಳಿಗೋಪುರ, ಹಸಿರುಕ್ರಾಂತಿ, ಶ್ವೇತ ಪತ್ರ,..........

ಇಂತಹ ಶಬ್ದಕ್ಕೆ ಶಬ್ದ ಎಂಬಂತಹ ಅನುವಾದ ಕ್ರಿಯೆಯನ್ನು ನೀವು ಗಮನಿಸಿದ್ದೀರಿ. ಅಂತಹ ಶಬ್ದಯುಗಳವನ್ನು ನಿಮ್ಮ ನೆನಪಿನಿಂದ ಆರಿಸಿ ಪಟ್ಟಿಮಾಡಿಕೊಳ್ಳಬಹುದು. ಆಗ ಹಲ್ಲುಪುಡಿ ಎಂಬಂತಹ ಹಾಸ್ಯಾಸ್ಪದ ಶಬ್ದಯುಗಳವೂ ನಿಮ್ಮ ಗಮನಕ್ಕೆ ಬರಬಹುದು.

**ಇಂಗ್ಲಿಷ್ ತದ್ಭವಗಳು**

ಇಂಗ್ಲಿಷ್ ಭಾಷೆಯು ಭಾರತದಲ್ಲಿ ನೆಲೆನಿಂತ ಮೇಲೆ ಅನಕ್ಷರಸ್ಥರೂ ಕೂಡ ಆ ಭಾಷೆಯ ಶಬ್ದಗಳನ್ನು ವಿಧಿಯಿಲ್ಲದೆ ಬಳಸಬೇಕಾಯಿತು. ಏಕೆಂದರೆ ಆಡಳಿತ ಭಾಷೆ ಇಂಗ್ಲಿಷ್ ಆದ ನಂತರ ಜನರು ತಮ್ಮ ಕೆಲಸಕಾರ್ಯಗಳಿಗೆ ಕಛೇರಿಗಳಿಗೆ ಹೋಗಬೇಕಾಯಿತು. ಅರ್ಜಿ ಬರೆಯಬೇಕಾಯಿತು. ನ್ಯಾಯಾಲಯಗಳಿಗೆ ಹೋಗಬೇಕಾಯಿತು. ಅಂತಹ ಸಂದರ್ಭಗಳಲ್ಲಿ ಅನಕ್ಷರಸ್ಥರು, ಪ್ರಾಥಮಿಕ ಶಿಕ್ಷಣವನ್ನು ಪಡೆದುಕೊಂಡಿರುವವರು ಇತ್ಯಾದಿ ಜನರು ಇಂಗ್ಲಿಷ್ ಶಬ್ದಗಳನ್ನು ಬಳಸಬೇಕಾಗಿ ಬಂದಿತು. ಅದರ ಮೂಲ ಉಚ್ಚಾರಣೆ ತಿಳಿಯದೆ ಅರ್ಥ ಮಾತ್ರ ತಿಳಿದಿದ್ದುದರಿಂದ ತಮಗೆ ತೋಚಿದಂತೆ ಉಚ್ಚರಿಸಿದರು. ಅಂತಹ ಶಬ್ದಗಳಿಂದ ಕೆಲವೊಮ್ಮೆ ಹಾಸ್ಯಕ್ಕೆ ಗುರಿಯಾಗುತ್ತಿದ್ದರು. ಹೀಗೆ ಜನಸಾಮಾನ್ಯರು ಬಳಸಿದ ಇಂಗ್ಲಿಷ್ ಶಬ್ದಗಳನ್ನು ತದ್ಭವಗಳೆಂದು ಕರೆಯಬಹುದು.

- ಟೆಮು, ಟೀಸನ್,ತಂಬಟೆ, ಲೋಟು, ಪಂಚೇರ್, ತೂಬು, ಎಬಡನ್ಸ್, ಗಿಲೀಟು, ಅರ್ಜುನ್, ಇಂದಕ್ಸನ್, ಅಸ್ಪತ್ರೆ, ಅಪ್ರೇಸನ್, ಮಿಸೀನು, ಬರಾಕು, ಕಂತ್ರಾಟು, ಗಲಾಸು, ಬಲ್ಬು, ಪೋಕ್ಸು, ಲಾಟೀನು, ಮಿಸೇನರಿ, ಬುರ್ನಾಸು, ಕಂದೀಲು, ತಿಕೀಟು, ಬಕೀಟು, ಹಾ(ಅ)ರ್ಮುನಿ, ಕಾಳಾರಟ್ಟು, ಮಾಸ್ತರ, ಮಿಡ್ಜ್ಯೆ, ಕಲೆಕ್ಸನ್ನು, ತೆಂಟು, ತ್ಯಾಕ್ಸಿ,.......

## 4.3.4. ಇತರ ಭಾಷಾ ಪದಗಳು

ಭಾರತಕ್ಕೆ ಇಂಗ್ಲಿಷರಂತೆ ಪೋರ್ಚುಗೀಸರು, ಡಚ್ಚರು, ಫ್ರೆಂಚರು ಕೂಡ ವ್ಯಾಪಾರಕ್ಕೆ ಎಂದುಕೊಂಡು ಬಂದು, ಇಲ್ಲಿನ ಪರಿಸ್ಥಿತಿಯನ್ನು ಕಂಡು, ದೇಶವನ್ನು ಆಳಬಹುದೆಂದು ತೀರ್ಮಾನಿಸಿ ಒಬ್ಬರೊಬ್ಬರ ಸ್ಪರ್ಧಿಗಳಾಗಿ ಹೋರಾಟಮಾಡಿದುದನ್ನು ನೀವು ಚರಿತ್ರೆಯಲ್ಲಿ ಓದಿದ್ದೀರಿ. ಅದಕ್ಕೂ ಮೊದಲು ರಾಜಕೀಯ ಉದ್ದೇಶದಿಂದಲೇ ಭಾರತವನ್ನು ಆಕ್ರಮಿಸಿದ ಇಸ್ಲಾಂ ಮತೀಯರು ದೀರ್ಘಕಾಲ ದೇಶವನ್ನು ಆಳಿದರು. ಸಾಮಾನ್ಯವಾಗಿ ಪ್ರಭುಗಳ ಭಾಷೆಯು ಆಡಳಿತ ಭಾಷೆಯಾಗುವುದು. ಸಹಜವಾದುದು. ಆದ್ದರಿಂದ ಅರ್‍ಯಾಬಿಕ್, ಪರ್ಷಿಯನ್, ಉರ್ದು ಭಾಷೆಯ ಶಬ್ದಗಳು ಕನ್ನಡವನ್ನು ಪ್ರವೇಶಿಸಿದುವು. ವಿಜ್ಞಾನವು ಬೆಳೆಯದಿದ್ದ ಕಾಲದಲ್ಲಿ ವಿಜ್ಞಾನವನ್ನು ಬಿಟ್ಟು ಇನ್ನಿತರ ಕ್ಷೇತ್ರಗಳ ಪಾರಿಭಾಷಿಕ ಶಬ್ದಗಳು 'ಚಾಲ್ತಿಗೆ'ಬಂದು ಕನ್ನಡದ ಶಬ್ದಗಳೇ ಇರಬಹುದೆಂಬ ಭಾವನೆಯನ್ನು ಮೂಡಿಸಿದುವು.

**ಅರ್‍ಯಾಬಿಕ್ ಮತ್ತು ಪರ್ಷಿಯನ್ ಮೂಲದ ಶಬ್ದಗಳು**

ಇಸ್ತಿಹಾರ್, ದಳ್ಳಾಳಿ, ಮೊಕದ್ದಮೆ, ದಾಖಲು, ಸಖತ್, ಮರ್ಜಿ, ಕರಾಮತ್ತು ರವಾನೆ, ಕಾಯಿಲೆ, ಕರಾಬು, ಕಿಮ್ಮತ್ತು, ಹುಕುಂ, ದುಕಾನ್, ಅಮಲ್ದಾರ್, ಹವಾಲ್ದಾರ್, ಸುಬೇದಾರ್, ಹುಜೂರ್, ಜವಾಬ್, ತ್ರಾಸ, ಕಚೇರಿ, ರುಮಾಲ್, ಖುರ್ಚಿ, ರಾಜಿ, ಕಾಗದ ತಾರೀಖು, ಜಮೀನು, ವಸೀಲಿ, ಶಾಬಾಸು, ಚುಕ್ಕಾಣಿ, ಲಂಗರ್, ಮೋಜು, ತಮಾಷೆ, ಕಾಯಿದೆ, ದಾವಾ, ಜಪ್ತಿ, ಪೋಡು, ಪಹಣಿ, ದರಖಾಸ್ತು, ಕಿಸ್ತು, ಬಂಗಲೆ, ಬಂದೋಬಸ್ತು, ದಸ್ತಾವೇಜು, ಶರಬತ್ತು, ಖಾಸಾ, ಬಹದ್ದೂರ, ಶಿಲ್ಕು, ಜೀನಸು, ಜಮಾ, ತೈನಾತಿ, ಬೇರೀಜು, ಖುಲಾಸು, ಖುಶಾಲು, ಬಿಲ್‌ಕುಲ್, ಅಸಲು, ಉಸ್ತಾದ್ರ, ದೌಲತ್ತು, ಪೋಟಗಿ, ದೇಣಗಿ, ದವಾಖಾನೆ, ಪೀಕದಾನಿ, ತಬಲಜಿ.................ಇತ್ಯಾದಿ ಅಸಂಖ್ಯ ಶಬ್ದಗಳಿವೆ.

**ಹಿಂದುಸ್ತಾನಿ ಭಾಷೆಯ ಶಬ್ದಗಳು**

ಅಂತಸ್ತು, ಅಂದಾಜು, ಅಂಬಾರಿ, ಇನಾಮು, ಇರಾದೆ, ಇಸವಿ, ಕಂದಾಯಿ ಗಡಿಯಾರ, ಗಾಡಿ, ಗಿರಾಕಿ, ಗಾಬರಿ, ಗುಲಾಮ, ಚಕ್‌ಬಂದಿ, ಚಿಲ್ಲರೆ, ಚರಂಡಿ, ಚೂರಿ ಟೋಪಿ, ಡಬ್ಬಿ, ಡೇರೆ, ಪಸಂದ, ರುಜು, ವಕೀಲ, ಅಸಾಮಿ........

**ಪೋರ್ಚು(ರ್ತು) ಗೀಸ್ ಶಬ್ದಗಳು**

ಭಾರತಕ್ಕೆ ವ್ಯಾಪಾರಕ್ಕೆಂದು ಬಂದ ಯೂರೋಪಿಯನ್ನರಲ್ಲಿ ಪೋರ್ಚುಗೀಸರೇ ಮೊದಲಿಗರು. ಅವರು ಕರ್ನಾಟಕಕ್ಕೆ ಒಮ್ಮೆ ಸೇರಿದ್ದ ಗೋಮಾಂತಕ ರಾಜ್ಯಕ್ಕೆ (ಗೋವಾ) ಬಂದುದರಿಂದ ಅವರ ಭಾಷೆಯ ಹಲವು ಶಬ್ದಗಳು ಕನ್ನಡ ಭಾಷೆಗೆ ಸೇರಿವೆ, ಅಂತಹ ಶಬ್ದಗಳಲ್ಲಿ ಕೆಲವು :

- ಅಲ್ಮೈರಾ, ಆಸ್ಪತ್ರೆ, ಇಸ್ತ್ರಿ, ಕೊರಡೆ, ಗುದಾಮು, ಚಾವಿ, ಜಂಗಾಲ್, ತಂಬಾಕು, ಇಸ್ಪೀಟು ಪಗಾರ, ಪಗೋಡ, ಪಪ್ಪಾಯಿ, ಪೀಪಾಯಿ, ಬಾತು, ಮೇಸ್ತ್ರಿ, ರಾತ್ಲು, ಲಾಂದ್ರ, ಆಯಾ.......

ಪೋರ್ಚುಗೀಸ್ ಭಾಷೆಯ ಶಬ್ದಗಳು ಕನ್ನಡಕ್ಕೆ ಸೇರಿದಷ್ಟು ಸಂಖ್ಯೆಯಲ್ಲಿ ಡಚ್, ಫ್ರೆಂಚ್ ಶಬ್ದಗಳು ಸೇರಿಲ್ಲ. ರೆಸ್ಟುರಾ, ಡೀಲಕ್ಸ್, ಮುಂತಾದುವು ಫ್ರೆಂಚ್ ಶಬ್ದಗಳಾಗಿವೆ.

## 4.4. ಭಾಷಿಕ ವ್ಯತ್ಯಾಸ

ಭಾಷೆಯಲ್ಲಿ ವ್ಯತ್ಯಾಸ ಅಥವಾ ಬೆಳವಣಿಗೆ ಆಗುವಾಗ ಮುಖ್ಯವಾಗಿ ಎರಡು ರೀತಿಯಲ್ಲಿ ಆಗುತ್ತದೆ. ೧ ಧ್ವನಿವ್ಯತ್ಯಾಸ (ಶಬ್ದಗಳಲ್ಲಿನ ಧ್ವನಿಗಳು ಬಿಟ್ಟು ಹೋಗುವುದೋ, ಬದಲಾಗುವುದೋ, ಹೊಸದಾಗಿ ಬಂದು ಸೇರುವುದೋ ಆಗಬಹುದು). ಇವನ್ನು ಧ್ವನಿ ವ್ಯತ್ಯಾಸಗಳು ಎಂದು ಕರೆಯುತ್ತಾರೆ ೨ ಅರ್ಥವ್ಯತ್ಯಾಸ (ಒಂದು ಶಬ್ದದ ಅರ್ಥ ವಿಕಸನಗೊಳ್ಳುವುದೋ, ಸಂಕುಚಿತವಾಗುವುದೋ, ಭಿನ್ನಾರ್ಥವನ್ನು ಪಡೆಯುವುದೋ ಆಗಬಹುದು). ಅಂಥವನ್ನು ಅರ್ಥ ವ್ಯತ್ಯಾಸಗಳು ಎಂದು ಕರೆಯುತ್ತಾರೆ.

ಈಗ ಈ ಕೆಲವು ಪ್ರಮುಖ ಬದಲಾವಣೆಗಳನ್ನು ಗುರುತಿಸಲು ತೊಡಗಬಹುದು.

೧. **ಸ್ವರ ಪ್ರಾರಂಭ** (Prosthesis) : ಯಾವುದೇ ಒಂದು ಶಬ್ದವು ವ್ಯಂಜನಾದಿಯಾಗಿದ್ದಲ್ಲಿ ಇಲ್ಲವೇ ದ್ವಿತ್ವಾರಂಭವನ್ನು ಪಡೆದಿದ್ದಲ್ಲಿ ಅದನ್ನು ಉಚ್ಚರಿಸುವ ಸಂದರ್ಭದಲ್ಲಿ ಉಚ್ಚಾರ ಸೌಲಭ್ಯಕ್ಕಾಗಿ ಆ ಆದಿ ವ್ಯಂಜನದ ಹಿಂದೆ ಸ್ವರವೊಂದನ್ನು ಸೇರಿಸಿಕೊಂಡು ಉಚ್ಚರಿಸುವುದು ರೂಢಿಯಲ್ಲಿದೆ. ಇದನ್ನೇ ಸ್ವರಪ್ರಾರಂಭವೆನ್ನುತ್ತಾರೆ. ಕನ್ನಡಕ್ಕೆ ಬಂದಿರುವ ಅನೇಕ ಇಂಗ್ಲಿಷ್ ಶಬ್ದಗಳನ್ನು ಹೀಗೆ ಉಚ್ಚರಿಸುವುದು ತುಂಬ ಪ್ರಚುರವಾಗಿದೆ. ಉದಾಹರಣೆಗೆ ಸ್ಕೂಲ್, ಸ್ಕ್ರೂ, ಸ್ಮೈಲ್, ಹಾಸ್ಪಿಟಲ್ ಎಂಬವುಗಳ ಆದಿಯಲ್ಲಿ ದ್ವಿತ್ವಾಕ್ಷರಗಳಿದ್ದು ಉಚ್ಚರಿಸಲು ಅವು ಕಠಿಣವಾದುದರಿಂದ ಅವನ್ನು ಕೆಲವರು ಇಸ್ಕೂಲ್, ಇಸ್ಕ್ರೂ, ಇಸ್ಮೈಲ್, ಇಸ್ಪಿತಾಲ್ ಎಂದು ಇಕಾರವೊಂದನ್ನು ಆರಂಭದಲ್ಲಿ ಸೇರಿಸಿ ಉಚ್ಚರಿಸುತ್ತಾರೆ. ತಮಿಳಿನಲ್ಲಿ ಪದಾರಂಭದಲ್ಲಿ ರ, ಲ ಗಳು ಬರುವುದಿಲ್ಲ, ಅದ್ದರಿಂದ ಅಲ್ಲಿ ಲೋಕಮ್, ರಾಮಮ್ ಎಂಬವನ್ನು ಹೇಳುವಾಗ ಉಲೋಕಂ (ಉಲಗಂ), ಇರಾಮಮ್ ಎಂದುಚ್ಚರಿಸುವುದುಂಟು.

೨ **ಅವಧಾರಣೆ** (Emphasis) : ಕೆಲವೊಮ್ಮೆ ಎಷ್ಟೋ ಶಬ್ದಗಳಲ್ಲಿ ಸ್ಪಷ್ಟತೆ ಮತ್ತು ಅರ್ಥ ಖಚಿತತೆಗಾಗಿ ಅನಗತ್ಯವಾಗಿ ಹೊಸ ಅಕ್ಷರಗಳನ್ನು ಸೇರಿಸಿ ಅವಧಾರಣೆಯನ್ನು ಕೊಡುವುದುಂಟು. ಉದಾಹರಣೆಗೆ ಕನ್ನಡದ ದೊಡ್ಡಸ್ತನ ಎಂಬ ಶಬ್ದ. ಇಲ್ಲಿ ದೊಡ್ಡ + ತನ = ದೊಡ್ಡತನ ಎಂದಾಗಿದ್ದರೆ ಸಾಕಿತ್ತು. ಹೆಡ್ಡ + ತನ = ಹೆಡ್ಡತನ, ಪೆಣ್ + ತನ = ಪೆಣ್ತನ ಎಂಬಂತೆ. ಆದರೆ ನಡುವೆ ಸಕಾರವೊಂದನ್ನು ಸೇರಿಸಿ ಇಲ್ಲದ ಅವಧಾರಣೆಯೊಂದನ್ನು ತಂದಿದ್ದೇವೆ. ಇಂಗ್ಲಿಷ್‌ನ Admiral, Messenger ಎಂಬ ಶಬ್ದಗಳು ಮೂಲತಃ Ammiral, Messager ಎಂದೇ ಇದ್ದುದು. ಕಾಲಾಂತರದಲ್ಲಿ ಅವಧಾರಣೆಯ ಪ್ರಕ್ರಿಯೆಯಿಂದ ಆ ಶಬ್ದಗಳಲ್ಲಿ ನಡುವೆ 'd', 'n' ಗಳು ಸೇರಿವೆ.

೩. **ಅಕ್ಷರಪಲ್ಲಟ** (Metathesis) : ಒಂದು ಶಬ್ದದಲ್ಲಿ ಉಚ್ಚಾರಣಾ ಸೌಕರ್ಯಕ್ಕಾಗಿ ಕೆಲವೊಮ್ಮೆ ಸ್ವರಗಳೂ ವ್ಯಂಜನಗಳೂ ಪರಸ್ಪರ ಪಲ್ಲಟಗೊಳ್ಳುವ ಪ್ರಕ್ರಿಯೆಯನ್ನು ವರ್ಣಪಲ್ಲಟ / ಅಕ್ಷರ ಪಲ್ಲಟವೆಂದು ಕರೆಯುತ್ತಾರೆ. ಕನ್ನಡದಲ್ಲಿ ಅಲರ್ - ಅರಲ್, ಎಲರ್ - ಎರಲ್, ಮಲರ್ - ಮರಲ್ ಪ್ರಾಚೀನ ಕಾವ್ಯಗಳಲ್ಲಿ ಕಂಡುಬರುವ ಉದಾಹರಣೆಗಳು. ಅಹುದು >ಹಉದು ಹವುದು > ಹೌದು, ಎಹಗೆ > ಹೇಗೆ, ಅಹಗೆ > ಹಅಗೆ ಹಾಗೆ ಎಂಬ ಶಬ್ದಗಳ ಸ್ವರೂಪ ನಿಷ್ಪತ್ತಿಯನ್ನು ಗಮನಿಸುದಾಗ ಅಕ್ಷರ ಪಲ್ಲಟ ಭಾಷಾ ಬೆಳವಣಿಗೆಯಲ್ಲಿ ಎಂಥ ಪಾತ್ರವನ್ನು ವಹಿಸಿದೆ ಎಂದು ತಿಳಿಯುತ್ತದೆ. ಅಸಗ > ಅಗಸ, ಕಾಗದ > ಕಾದಗ, ವಾರಣಾಸಿ > ಬಾರಣಾಸಿ > ಬಾಣರಾಸಿ > ಬನಾರಸಿ, ನಾರಿಕೇಲ > ನಾಲಿಕೇರ ಎಂಬ ಅಕ್ಷರ ಪಲ್ಲಟಕ್ಕೆ ಇತರ ಕೆಲವು ಉದಾಹರಣೆಗಳು.

೪. **ಮಿತವ್ಯಯಾಸಕ್ತಿ** (Economy) : ಸೌಲಭ್ಯಾಕಾಂಕ್ಷೆಯೇ ಇದು ಎಂಬುದನ್ನು ಈಗಾಗಲೇ ನೋಡಲಾಗಿದೆ. ಮಾನವ ಸಹಜವಾದ ಪ್ರವೃತ್ತಿಯಿದು. ಶಬ್ದಾರಂಭದ ವ್ಯಂಜನವನ್ನೋ, ಶಬ್ದಾರಂಭದ ಎರಡು ವ್ಯಂಜನಗಳಲ್ಲಿ ಒಂದನ್ನೋ ತ್ಯಜಿಸುವುದು, ಒಂದು ಪದದಲ್ಲಿ ಎರಡು ಬೇರೆ ಶಬ್ದಗಳಿದ್ದರೆ ಅವನ್ನು ಒಟ್ಟು ಗೂಡಿಸಿ ಉಚ್ಚರಿಸುವುದು, ಕೆಲವು ನಾಮಪದಗಳನ್ನು ಉದ್ದೇಶಪೂರ್ವಕವಾಗಿಯೇ ಮೊಟಕುಗೊಳಿಸುವುದು ಮುಂತಾದ ಬಗೆಗಳನ್ನು ಇಲ್ಲಿ ಕಾಣಬಹುದು. ಸ್ನೇಹ > ನೇಹ, ಪ್ರಸಾದ > ಹಸಾದ ಎಂಬಲ್ಲಿ ದ್ವಿತ್ವಾರಂಭದ ಎರಡು ವ್ಯಂಜನಗಳಲ್ಲಿ ಒಂದು ಲುಪ್ತವಾಗಿದೆ. ಅವಿಧವಾ > ಐದೆ, ಎಳ್‌ನೆಯ್ > ಎಳ್ನೆಯ್ > ಎಣ್ಣೆ > ಎಣ್ಣೆ ಎಂಬುವುಗಳಲ್ಲಿ ಉದ್ದೇಶಪೂರ್ವಕ ಮಿತ ವ್ಯಯಾಸಕ್ತಿಯ ಗುಣವನ್ನು ಕಾಣಬಹುದು.

೫. **ರೂಪಸಾಮ್ಯ** (Analogy) : ಇದನ್ನು ಸಾದೃಶ್ಯ ಸೃಷ್ಟಿ ಎಂದೂ ಕರೆಯುವುದುಂಟು. ಒಂದು ಶಬ್ದರೂಪವನ್ನು ಗಮನಿಸಿ ಅದೇ ಮಾದರಿಯ ಮೇಲೆ ಮತ್ತೊಂದು ಶಬ್ದವನ್ನೂ ಸೃಷ್ಟಿಸುವ ಪ್ರಕ್ರಿಯೆಯನ್ನು ಸಾದೃಶ್ಯ ಸೃಷ್ಟಿ ಎಂದು ಕರೆಯಲಾಗುತ್ತದೆ. ಪೂರ್ವ ಎಂಬುದರ ಗುಣವಚನ ರೂಪವಾಗಿ ಪೌರ್ವಾತ್ಯ ಎಂಬ ಪದ ಬಂದಿತು. ಇದರ ಮಾದರಿಯ ಮೇಲೆ ಪಶ್ಚಿಮದ ಗುಣವಚನ ಪಾಶ್ಚಿಮಾತ್ಯ ಆಗಬೇಕಿತ್ತು. ಆದರೆ ಪಾಶ್ಚಾತ್ಯ ಆಗಿದೆ. ಹೊದ್ದು, ಕದ್ದು ಎಂಬ ರೂಪಗಳನ್ನು ಗಮನಿಸಿ 'ಹೊದಿ' ಹೊದ್ದುವಿನ ಧಾತುರೂಪ ಎಂದರಿತು ಅದರ ಮಾದರಿಯ ಮೇಲೆ 'ಕದಿ' ಎಂಬ ಧಾತುರೂಪವನ್ನು ಸೃಷ್ಟಿಸಲಾಗಿದೆ. ಆದರೆ ವ್ಯಾಕರಣಗಳಲ್ಲಿ ಉಕ್ತವಾಗಿರುವಂತೆ ದಿಟವಾಗಿ ಇದರ ಧಾತುರೂಪ ಎಂದರಿತು ಆದರೆ ವ್ಯಾಕರಣಗಳಲ್ಲಿ ಉಕ್ತವಾಗಿರುವಂತೆ ದಿಟವಾಗಿ ಇದರ ಧಾತುರೂಪ ಕಳ್. ದಿವಸ್ಪತಿಯನ್ನು ಗಮನಿಸಿ ವನಸ್ಪತಿ ಎಂಬುದನ್ನೂ, ನಿಲ್ > ನಿಂತು ಗಮನಿಸಿ ಕೂರ್ > ಕುಂತು ಎಂಬುದನ್ನೂ ಅಲರಿಚ ಎಂಬುದನ್ನು ಗಮನಿಸಿ ಬೆರಲಿಚ ಎಂಬುದನ್ನೂ ಚಾಲೂ ಮಾಡಿದ್ದಾರೆ.

೬ **ದ್ವಿರುಕ್ತಿ** (Tautology) : ಯಾವುದೇ ಒಂದು ಶಬ್ದದ ಅರ್ಥವು ಕಾಲಕ್ರಮದಲ್ಲಿ ಅಸ್ಪಷ್ಟವಾಗುತ್ತ ಬರುತ್ತಿದೆ ಎನಿಸಿದರೆ ಅದೇ ಅರ್ಥದ ಬೇರೆ ಭಾಷೆಯ ಇಲ್ಲವೇ ಅದೇ ಭಾಷೆಯ ಪದವೊಂದನ್ನು ಆ ಶಬ್ದಕ್ಕೆ ಸೇರಿಸಿ ಆ ಶಬ್ದದ ಅರ್ಥವನ್ನು ದೃಢೀಕರಿಸಲು ಸ್ಪಷ್ಟೀಕರಿಸಲು ಸೇರಿಸುವುದುಂಟು. ಹೀಗಾಗಿ ಒಂದೇ ಅರ್ಥಕೊಡುವ ಎರಡು ಶಬ್ದಗಳು ಒಂದೆಡೆ ಸೇರಿ ಒಂದೇ ಅರ್ಥಕೊಡುತ್ತವೆ. ಇದನ್ನೆ ದ್ವಿರುಕ್ತಿಯೆಂದು ಕರೆಯುತ್ತಾರೆ. ಕನ್ನಡದ ಅವಳಿ ಜವಳಿ, ಕೂಡಲ ಸಂಗಮ, ಹಳದೀ ಪೀತಾಂಬರ, ಎಳ್ಳೆಣ್ಣೆ, ಆಳುಮನುಷ್ಯ, ಕಾಗದಪತ್ರ ಇದಕ್ಕೆ ಕೆಲವು ಉದಾಹರಣೆಗಳು.

೭ **ತಪ್ಪು ಸಾಹಚರ್ಯ**(False Association) : ಬೇರೆ ಭಾಷೆಯ ಶಬ್ದವೊಂದನ್ನು ಕೇಳಿದಾಗ ಅಸ್ಪಷ್ಟ ಕೇಳುವಿಕೆ, ಅರ್ಥದ ಅಸ್ಪಷ್ಟ ಗ್ರಹಿಕೆ, ಉಚ್ಚಾರಣೆಯ ಅಸೌಕರ್ಯ ಇಂಥ ಕೆಲವು ಕಾರಣಗಳಿಂದ ಮೂಲ ಶಬ್ದಗಳ ರೂಪಗಳು ಕೊಂಚಮಟ್ಟಿಗೆ ಬದಲಾಗುವುದುಂಟು. ಜನ್ಮ > ಜಲ್ಮ, ನೋಟಿಸು > ಲೋಟೀಸು, ಡ್ರೆಸ್ಸು > ದಿರಸು, ಕ್ಲೋಸು > ಕುಲಾಸು ಮುಂತಾದವು ಇದಕ್ಕೆ ಕೆಲವು ಉದಾಹರಣೆಗಳು.

೮. **ಭಾಷಾಗೌರವ** (Euphemism) : ಇದನ್ನು ಕೆಲವರು ಸೌವ್ಯೋಕ್ತಿ ಎಂದು ಕರೆದಿದ್ದಾರೆ. ಎಷ್ಟೋ ಸಂದರ್ಭಗಳಲ್ಲಿ ಆ ಮಂಗಲಕರ ಸಂಗತಿಗಳನ್ನು ಅಪ್ರಿಯ ಘಟನೆಗಳನ್ನು ನೇರವಾಗಿ ವ್ಯಕ್ತ ಪಡಿಸದೆ ಗಂಭೀರವಾಗಿ, ಗೌರವವಾಗಿ, ಪರೋಕ್ಷವಾಗಿ ಕೆಲವರು ವ್ಯಕ್ತಪಡಿಸುತ್ತಾರೆ. ಇದನ್ನೆ ಭಾಷಾಗೌರವವೆಂದೂ, ಸೌವ್ಯೋಕ್ತಿಯೆಂದು ಕರೆಯುತ್ತಾರೆ. ಉದಾ ಸತ್ತನು = ದಿವಂಗತರಾದರು ಕೈಲಾಸವಾಸಿಗಳಾದರು, ದೀಪ ಆರಿತು = ದೀಪ ಶಾಂತವಾಯಿತು, ಬಳೆ ಒಡೆಯಿತು = ಬಳೆ ಹೆಚ್ಚಿತು.

೯. **ಅರ್ಥಸಂಕೋಚ** (Contraction) : ಯಾವುದೇ ಒಂದು ಶಬ್ದಕ್ಕೆ ಮೂಲದಲ್ಲಿ ವಿಸ್ತೃತವಾದ ಅರ್ಥವಿದ್ದು ಕಾಲಾಂತರದಲ್ಲಿ ಅದರ ಅರ್ಥವು ಸೀಮಿತಗೊಂಡರೆ ಅದನ್ನು ಅರ್ಥ ಸಂಕೋಚ ಎಂದು ಕರೆಯುತ್ತೇವೆ. ಒಡವೆ ಎಂಬ ಶಬ್ದವು ಆರಂಭದಲ್ಲಿ ಒಡೆ = ಪಡೆದಿರು ಎಂಬ ಹಿನ್ನೆಲೆಯಲ್ಲಿ ಆಸ್ತಿ ಎಂಬರ್ಥವನ್ನು ಹೊಂದಿತ್ತು ಎನಿಸುತ್ತದೆ. ಈಗ ಅದು ಕೇವಲ ಆಭರಣ ಎಂಬರ್ಥ ಪಡೆದುಕೊಂಡಿದೆ. ಪೊನ್ ಎಂಬುದರ ಮೂಲಾರ್ಥ ಲೋಹ ಈಗ ಹೊನ್ನು, ಚಿನ್ನ ಎಂಬಷ್ಟಕ್ಕೆ ಸೀಮಿತಗೊಂಡಿದೆ. ಆಳ್ ಎಂಬುದರ ಮೂಲಾರ್ಥ ಮನುಷ್ಯ. ಈಗ ಸೇವಕ ಎಂದು

ಮಾತ್ರ ಬಳಕೆಯಾಗುತ್ತದೆ. ಕುರುಬ ಎಂಬುದರ ಮೂಲಾರ್ಥ ಬೆಟ್ಟದಲ್ಲಿ ವಾಸಮಾಡುವವ. ಈಗ ಒಂದು ಜಾತಿಯವನೆಂದು ಮಾತ್ರ ಬಳಕೆಯಾಗುತ್ತಿದೆ.

೧೦. **ಅರ್ಥವಿಕಾಸ** (Extension) : ಯಾವುದೇ ಒಂದು ಶಬ್ದಕ್ಕೆ ಮೊದಲು ಸೀಮಿತವಾದ ಅರ್ಥವಿದ್ದು ಕಾಲಾಂತರದಲ್ಲಿ ಅದರ ಅರ್ಥವು ವಿಕಸನಗೊಂಡರೆ ಅದನ್ನು ಅರ್ಥವಿಕಾಸ ಎನ್ನುತ್ತಾರೆ. ಇದು ಕೂಡ ಎಲ್ಲ ಭಾಷೆಗಳಲ್ಲಿ ಕಂಡುಬರುವ ಒಂದು ವೈಲಕ್ಷಣ್ಯವಾಗಿದೆ. ಎಣ್ಣೆ ಎಂಬ ಶಬ್ದವು ಮೂಲತಃ ಎಳ್ಳಿನಿಂದ ತೆಗೆದ ಜಿಡ್ಡನ್ನು ಮಾತ್ರ ಸೂಚಿಸುತ್ತಿತ್ತು (ಎಳ್+ನೆಯ್). ಆದರೆ ಈಗ ಅದು ಯಾವುದೇ ವಸ್ತು / ಕಾಳಿನಿಂದ ತೆಗೆದ ಜಿಡ್ಡಿಗೂ ಅನ್ವಯವಾಗುವ ಶಬ್ದವಾಗಿದೆ. ಹರಳೆಣ್ಣೆ, ಬೇವಿನೆಣ್ಣೆ, ಕೊಬ್ಬರಿಎಣ್ಣೆ, ಆಚ್ಚೆಳ್ಳೆಣ್ಣೆ. ಹುಚ್ಚೆಳ್ಳೆಣ್ಣೆ. ಎಳ್ಳಿನಿಂದ ತೆಗೆದ ಎಣ್ಣೆಯನ್ನು ಇಂದು ನಾವು ಎಳ್ಳೆಣ್ಣೆ ಎಂದೇ ಕರೆಯಬೇಕಾದುದು. ಓಲೆ ಎಂಬ ಶಬ್ದವೂ ಹೀಗೆಯೇ. ಹಿಂದೆ ತಾಳೆಗರಿಯಿಂದ ಮಾಡಿದ ಕಿವಿಯ ಆಭರಣವನ್ನು ಓಲೆ ಎನ್ನುತ್ತಿದ್ದರು. ಈಗ ಓಲೆ ಎಂಬುದು ಯಾವುದೇ ವಸ್ತುವಿನಿಂದ ಮಾಡಿದ ಕಿವಿಯ ಆಭರಣವನ್ನು ಸಂಕೇತಿಸುತ್ತದೆ. ಮುತ್ತಿನೋಲೆ, ಬೆಂಡೋಲೆ, ಚಿನ್ನದ ಓಲೆ, ಕೆಂಪಿನ ಓಲೆ ಇತ್ಯಾದಿ.

೧೧. **ಹೀನಾರ್ಥಪ್ರಾಪ್ತಿ** (Deterioration) : ಯಾವುದೇ ಒಂದು ಶಬ್ದಕ್ಕೆ ಮೂಲತಃ ಉತ್ತಮವಾದ ಅರ್ಥವಿದ್ದು ಕಾಲಾಂತರದಲ್ಲಿ ಅದಕ್ಕೆ ಹೀನವಾದ ಎಂದರೆ ಕೆಟ್ಟ ಅರ್ಥ ಬಂದರೆ ಅದನ್ನು ಹೀನಾರ್ಥ ಪ್ರಾಪ್ತಿ ಎಂದು ಕರೆಯುತ್ತಾರೆ. ಓಜ ಎಂಬ ಶಬ್ದ ಒಂದು ಕಾಲದಲ್ಲಿ ಕನ್ನಡದಲ್ಲಿ ಉಪಾಧ್ಯಾಯ ಎಂಬರ್ಥವನ್ನು ಕೊಡುತ್ತಿತ್ತು, ಈಗ ಬಡಗಿ ಎಂಬರ್ಥ ಕೊಡುತ್ತಿದೆ. ನಾತ ಎಂಬ ಶಬ್ದಕ್ಕೆ ಒಂದು ಕಾಲವಲ್ಲಿ ವಾಸನೆ, ಗಂಧ ಎಂಬರ್ಥವಿತ್ತು, ಈಗ ದುರ್ವಾಸನೆ ಎಂಬರ್ಥ ಬಂದಿದೆ. ಕೂಳು ಎಂಬುದಕ್ಕೆ ಮೊದಲು ಆಹಾರ ಎಂಬರ್ಥವಿತ್ತು, ಈಗ ಅದರ ಅರ್ಥ ಕೆಟ್ಟಿದೆ. ಉದಾ ಕೂಳಿಡು.

ಅರ್ಥಬದಲಾವಣೆ (Transference) : ಯಾವುದೇ ಒಂದು ಶಬ್ದದ ಅರ್ಥವು ಸಂಪೂರ್ಣವಾಗಿ ಮೂಲಾರ್ಥದಿಂದ ಭಿನ್ನವಾದಲ್ಲಿ ಆ ಶಬ್ದದಲ್ಲಿ ಅರ್ಥಬದಲಾವಣೆಯಾಗಿದೆ ಎನ್ನುತ್ತೇವೆ. ಉದಾಹರಣೆ ಅವಸರ ಎಂಬ ಸಂಸ್ಕೃತ ಶಬ್ದವು ಮೂಲತಃ ಅವಕಾಶ. ಆ ಸಂದರ್ಭ ಎಂಬರ್ಥದಲ್ಲಿ ಬಳಕೆಯಾಗುತ್ತಿತ್ತು. ಈಗ ಅದು ಆತುರ, ಬೇಗ ಎಂಬರ್ಥ ಕೊಡುತ್ತಿದೆ. ವಿಪರೀತ ಎಂಬ ಸಂಸ್ಕೃತ ಶಬ್ದವು ಮೂಲತಃ ವಿರುದ್ಧ, ವಿರೋಧ ಎಂಬರ್ಥ ಕೊಡುತ್ತಿತ್ತು, ಈಗ ಕನ್ನಡದಲ್ಲಿ ಅದು ಆಧಿಕ್ಯ, ಹೆಚ್ಚಳವನ್ನು ಸೂಚಿಸುವಂಥದಾಗಿದೆ. ಅಮ್ಮ ಎಂಬ ಪದಕ್ಕೆ ಹಳಗನ್ನಡದಲ್ಲಿ ತಂದೆ ಎಂಬರ್ಥವಿತ್ತು, ಈಗ ಅದಕ್ಕೆ ತಾಯಿ ಎಂಬರ್ಥ ಬಂದಿದೆ.

ಪೂರ್ವೋಕ್ತ ಬದಲಾವಣೆಗಳಲ್ಲಿ ಸ್ವರಪ್ರಾರಂಭ, ಅವಧಾರಣೆ, ಅಕ್ಷರಪಲ್ಲಟ, ಮಿತವ್ಯಯಾಸಕ್ತಿ, ತಪ್ಪು ಸಹಚರ್ಯಗಲು ಧ್ವನಿ ವ್ಯತ್ಯಾಸ ಗುಂಪಿಗೆ ಸೇರುವೊಥವಾಗಿವೆ. ಉಳಿದವು ಅರ್ಥವ್ಯತ್ಯಾಸಕ್ಕೆ ಸಂಬಂಧಿಸಿದುವಾಗಿವೆ.

## 4.5. ಭಾಷಾ ಶಾಸ್ತ್ರದ ಹಿನ್ನೆಲೆಯಲ್ಲಿ ಕೆಲವು ಪದಗಳ ವಿವರಣೆ

**ಅರಸ :** ಈ ಶಬ್ದದ ಬಗ್ಗೆ ತುಂಬಾ ಭಿನ್ನವಾದ ಅಭಿಪ್ರಾಯಗಳಿವೆ. ಸಂಸ್ಕೃತದ ಶಬ್ದದ ದ್ರಾವಿಡೀಕರಣ ಎಂದು ಕೆಲವರು ಹೇಳಿದರೆ ದ್ರಾವಿಡ ಶಬ್ದದ ಸಂಸ್ಕೃತೀಕರಣ ಎಂದು ಮತ್ತೆ

ಕೆಲವರು ಭಾವಿಸುತ್ತಾರೆ. ರಾಜನ್ ಎಂಬುದು ರಾಶನ್ ಆಗಿ ಅರಾಶನ್ ಎಂದು ಮಾರ್ಪಟ್ಟು ಅರಸನ್ ಮತ್ತು ಅರಸ ಆಗಿರಬೇಕು. ಎಂಬುದು ಒಂದು ವಾದ. ಅರಸ, ಅರಸನ್ ಎಂಬ ಶಬ್ದವನ್ನು ಸಂಸ್ಕೃತಕ್ಕೆ ತೆಗೆದುಕೊಂಡು ರಾಜನ್ ಎಂದು ಮಾಡಿಕೊಂಡಿದ್ದಾರೆಂಬುದು ಇನ್ನೊಂದು ವಾದ. ಕೇಶಿರಾಜನ ಪ್ರಕಾರ ಅರಸ ಎಂಬುದು ಕನ್ನಡ ಶಬ್ದ. ಏಕೆಂದರೆ ಅರಸುಕುಮಾರ ಎಂಬುದು ಆತನ ಪ್ರಕಾರ ಅರಿಸಮಾಸ, ಕುಮಾರ ಎಂಬುದು ಸಂಸ್ಕೃತ ಶಬ್ದವೆಂಬುದು ಸ್ಪಷ್ಟವಾಗಿದೆ. ಅಂದಮೇಲೆ ಅರಸ, ಅರಸು ಕನ್ನಡ ಶಬ್ದವಾಗಿರಬೇಕು. ಅಂದರೆ ಅದು ದೇಶ್ಯವೆಂದು ಹೇಳಿದಂತೆಯೇ ಆಯಿತು.

**ಅಡಗೂಲಜ್ಜಿ** : ಹಿಂದಿನ ಕಾಲದಲ್ಲಿ ಊರಿಂದ ಊರಿಗೆ ಪ್ರಯಾಣಮಾಡುತ್ತಿದ್ದವರು, ಹಸಿವೆಯಾದಾಗ ಯಾವುದಾದರೂ ಊರಿನಲ್ಲಿ ಅಡುಗೂಲಜ್ಜಿ ಇದ್ದಾರೆಯೆ ಎಂದು ಕೇಳಿ ತಿಳಿದು ಊಟದ ವ್ಯವಸ್ಥೆಯನ್ನು ಮಾಡಿಸಿಕೊಳ್ಳುತ್ತಿದ್ದರು. ಅಡಗೂಲಜ್ಜಿಯು ಅವರಿಂದ ಹಣತೆಗೆದು ಕೊಂಡು ಊಟ ನೀಡುತ್ತಿದ್ದಳು. ಅಡಗೂಲಜ್ಜಿ ಎಂಬ ಶಬ್ದಕ್ಕೆ ಇತರೆ ಪರ್ಯಾಯ ಶಬ್ದಗಳೂ ಇವೆ. ಅಡುಗುಲಜ್ಜಿ, ಅಡುಗೂಳಜ್ಜಿ, ಅಡುಗೂಲಜ್ಜಿ ಇವುಗಳು ನಿಜವಾಗಿ ಪರ್ಯಾಯ ಪದಗಳಲ್ಲ. ಅವುಗಳು ಜನರ ಬಾಯಿಯಲ್ಲಿ ಹೊಂದುತ್ತಿದ್ದ ವ್ಯತ್ಯಾಸಗಳು. ಕೆಲವೊಂದು ವಿವರಣಾ ಗ್ರಂಥಗಳಲ್ಲಿ ಈ ಶಬ್ದವನ್ನು ಅಡು+ಕೂಲಿ+ಅಜ್ಜಿ ಎಂದು ಬಿಡಿಸಿದ್ದಾರೆ. ಅಡುವ ಅಂದರೆ ಬೇಯಿಸುವ, ಕೂಲಿ ಪಡೆಯುವ, ಅಜ್ಜಿ ಎಂಬುದೇನೋ ಸರಿಯಾಗಿದೆ. ಆದರೆ 'ಕೂಲಿ' ಎಂಬ ಶಬ್ದ ಸರಿಯಾದ ಅರ್ಥವನ್ನು ಕೊಡುವುದಿಲ್ಲ. ಕೂಲಿ ಎನ್ನುವ ಬದಲು ಕೂಳ್, ಕೂಟು ಎಂಬ ಶಬ್ದಗಳನ್ನು ಇಟ್ಟರೆ ಅರ್ಥ ಹೊಂದಿಕೊಳ್ಳುತ್ತದೆ. ಕೂಟ್, ಕೂಳ್ ಎಂದರೆ ಅನ್ನ ಎಂದು ಅರ್ಥ. ಸಂಸ್ಕೃತದ ಅನ್ನ ಶಬ್ದವು ಕನ್ನಡದ ಕೂಳನ್ನು ಮರೆಸಿ ಬಿಟ್ಟಿತು. ಈ ಶಬ್ದದಲ್ಲಿ ಅನ್ನವನ್ನು ಅಡುವ ಅಜ್ಜಿ ಎಂಬ ಅರ್ಥವಿರುವುದು ಸ್ಪಷ್ಟವಾಗಿದೆ. ದಾರಿಹೋಕರಿಗೆ ಅನ್ನಬಡಿಸಿ ಜೀವನ ನಡೆಸುತ್ತಿದ್ದ ಅಜ್ಜಿಯನ್ನು ಅಡಗೂಲಜ್ಜಿ ಎಂದು ಕರೆಯಲಾಗುತ್ತಿತ್ತು. ಈಗ ಈ ಪದಕ್ಕೆ ಬೇರೊಂದು ಅರ್ಥದ ಛಾಯೆ ಬಿದ್ದಿರುವಂತೆ ತೋರುತ್ತದೆ. ಹಳೆಯ ಸಂಪ್ರದಾಯದ ಹೆಂಗಸು ಎಂಬ ಅರ್ಥವನ್ನು ಕೊಡಲಾಗಿದೆ. ಆದರೆ ಅಡುಗೂಲಜ್ಜಿ ಇರುತ್ತಿದ್ದ ಕಾಲದ ಸಂಪ್ರದಾಯ ಎಂದು ಅರ್ಥಮಾಡಿಕೊಂಡರೆ ಅಷ್ಟು ವ್ಯತ್ಯಾಸವಾಗುವುದಿಲ್ಲ. ಒಟ್ಟಿನಲ್ಲಿ ಇದು ದೇಶ್ಯಶಬ್ದವಾಗಿದೆ.

**ಆಸ್ಪತ್ರೆ** : ಇದು ಅನ್ಯದೇಶ್ಯವೇ ಆಗಿದೆ. ಮೇಲುನೋಟಕ್ಕೆ ದೇಶ್ಯದಂತೆಯೇ ಕಾಣಿಸುತ್ತದೆ. ಅನಕ್ಷರಸ್ಥರೇ ಆಗಲಿ, ಅಕ್ಷರಸ್ಥರೇ ಆಗಲಿ ಆಸ್ಪತ್ರೆ ಎಂಬ ಶಬ್ದವನ್ನು ಬಳಸುವಾಗ ಅದು ಕನ್ನಡ ಶಬ್ದ ಎಂದೇ ತಿಳಿದಿರುತ್ತಾರೆ. ಇಂಗ್ಲಿಷಿನ ಹಾಸ್ಪಿಟಲ್ ಎಂಬುದು ತದ್ಭವ ರೂಪ ಪಡೆದು ಆಸ್ಪತ್ರೆ ಎಂದಾಗಿದೆ. ಇಂಗ್ಲಿಷಿನಲ್ಲಿ ಹಾಸ್ಪಿಟಲ್ ಎಂಬ ಶಬ್ದಕ್ಕೆ ಅತಿಥಿಗೃಹ ಎಂಬ ಅರ್ಥವಿದೆ. ಆದ್ದರಿಂದ ಹಾಸ್ಪಿಟ್ಯಾಲಿಟಿ ಎಂಬುದಕ್ಕೆ ಆತಿಥ್ಯ, ಸತ್ಕಾರ ಎಂಬ ಅರ್ಥವಿದೆ. ಆಸ್ಪತ್ರೆ ಎಂದು ಹೇಳಿದಾಗ ಈ ಅರ್ಥವು ಮರೆಯಾಗಿರುತ್ತದೆ. ಮೊದಲಿನ ವಿಶಾಲವಾದ ಅರ್ಥವು ಸಂಕುಚಿತವಾಗಿ ಬಿಡುತ್ತದೆ. ರೋಗಿಗಳ 'ಆತಿಥ್ಯ' ಎಂಬ ವ್ಯಾಪ್ತಿಯನ್ನು ಹೊಂದುತ್ತದೆ. (ಇಂದಿನ ಹೈಟೆಕ್ ಆಸ್ಪತ್ರೆಗಳಲ್ಲಿ "ಆತಿಥ್ಯ"ವನ್ನು ನಿರೀಕ್ಷಿಸಲಾಗದು !) ಸರ್ಕಾರಿ ಆಸ್ಪತ್ರೆಗಳ ಬಗ್ಗೆ ಹಿಂದಿನ ಆಡುಮಾತು ಈಗ ಎಷ್ಟು ಸತ್ಯವಾಗಿ ಬಿಟ್ಟಿದೆ ನೋಡಿ. ಜನ ಹೇಳುತ್ತಿದ್ದರು 'ಅಪ್ಪ ಅವ್ವ ಸತ್ರೆ ಆಸ್ಪತ್ರೆ' !

**ಉಡುಗೊರೆ** : ಇದು ದೇಶ್ಯ ಶಬ್ದ. ಕೆಲವರು 'ಈ ಶಬ್ದದಲ್ಲಿ ಒಂದು ಭಾಗ ಕನ್ನಡವೇನೋ ನಿಜ, ಇನ್ನೊಂದು ಭಾಗ ಕನ್ನಡದ್ದಲ್ಲ' ಎನ್ನುತ್ತಾರೆ. ಉಡು ಎಂದರೆ ಉಟ್ಟುಕೊಳ್ಳುವುದು, ಬಟ್ಟೆಯನ್ನು ಸುತ್ತಿಕೊಳ್ಳುವುದು. ಕೊರೆ ಎಂದರೆ ಬಟ್ಟೆ. ಇದು ಹಳಗನ್ನಡದಲ್ಲಿ ಕೊಱೆ ಎಂಬ ರೂಪವನ್ನು ಹೊಂದಿದೆ. ಆದರೂ ಕೊಱೆ ಎಂಬುದು ಸಂಸ್ಕೃತದ ಕವರೀ ಶಬ್ದದಿಂದ ಬಂದಿದೆ ಎನ್ನುವವರಿದ್ದಾರೆ. ಆದರೆ ಕೊಱೆ ಎಂಬಲ್ಲಿನ ಶಕಟರೇಫವನ್ನು ನೋಡಿದರೆ ಇದು ಅಚ್ಚಗನ್ನಡ

ಶಬ್ದವಿರಬೇಕು ಎನ್ನಿಸುತ್ತದೆ. ಉಟ್ಟುಕೊಳ್ಳುವ ಬಟ್ಟೆ ಎಂದು ಹೇಳಲು ಉಡುವ ಕೊಡೆ ಎಂದು ಬಳಸಲಾಗಿದೆ. ಉಡುವ +ಕೊಡೆ = ಉಡುಗೊಡೆ, ಉಡುಗೊರೆ. ಉಟ್ಟುಕೊಳ್ಳುವ ಬಟ್ಟೆಯನ್ನು ಕೊಡುವುದು, ಉಡುಗೊರೆ ಕೊಡುವುದು, ಕಾಲ ಕಳೆದಂತೆ ಬೇರೆ ಅರ್ಥವನ್ನು ಪಡೆದುಕೊಂಡಿತು. ವಿಶೇಷ ಸಂದರ್ಭಗಳಲ್ಲಿ ಬಟ್ಟೆ ಮಾತ್ರವಲ್ಲ ಬೇರೆ ಏನನ್ನು ಕೊಟ್ಟರೂ ಅದಕ್ಕೂ ಉಡುಗೊರೆ ಕೊಡುವುದು ಎಂಬ ಅರ್ಥಬೆಳೆಯಿತು. ಈ ಶಬ್ದದ ಅರ್ಥವು ವಿಸ್ತಾರವಾಗಿರುವುದನ್ನು ಗುರುತಿಸಬಹುದು.

**ಒತ್ತುಕಾಗದ** : ಇದು ಅನ್ಯದೇಶ್ಯ ನಿಷ್ಪನ್ನ ಶಬ್ದ. ಅನ್ಯಭಾಷೆಯ ಶಬ್ದಗಳನ್ನು ಸ್ವೀಕರಿಸುವಾಗ ಒಂದೇ ವಿಧಾನವನ್ನು ಅನುಸರಿಸುವುದಿಲ್ಲ. ಹಿಂದಿನ ಪಾಠದಲ್ಲಿ ಹೇಳಿರುವಂತೆ ಇಂಗ್ಲಿಷಿನಿಂದ ವಿವಿಧ ವಿಧಾನಗಳಲ್ಲಿ ಶಬ್ದಗಳು ಕನ್ನಡಕ್ಕೆ ಬಂದಿವೆ. ಅಂಥ ವಿಧಾನಗಳಲ್ಲಿ ಶಬ್ದಕ್ಕೆ ಶಬ್ದವಿಟ್ಟು ಅನುವಾದ ಮಾಡಿಕೊಳ್ಳುವುದೂ ಒಂದು ವಿಧಾನ. ಇಂಗ್ಲಿಷಿನಲ್ಲಿ ಬ್ಲಾಟಿಂಗ್-ಪೇಪರ್ ಎಂಬ ಶಬ್ದವಿದೆ. ಅದನ್ನು ಕನ್ನಡಕ್ಕೆ ತೆಗೆದುಕೊಳ್ಳಬೇಕು ಎನ್ನಿ. ಏನು ಮಾಡಬಹುದು ಯೋಚಿಸಿ. ಕನ್ನಡ ಅಕ್ಷರಗಳಲ್ಲಿ ಮೇಲೆ ಬರೆದಿರುವಂತೆ ಬರೆದುಕೊಂಡು ರೂಢಿಗೆ ತಂದುಬಿಡುವುದೂ ಸಾಧ್ಯ. ಹಾಗೆಯೇ ಎಷ್ಟೋ ಶಬ್ದಗಳು ಬಂದಿವೆ ಎಂಬುದು ನಿಮಗೆ ತಿಳಿದಿದೆ. ಇಲ್ಲಿ ಆಗಿರುವ ಸ್ವೀಕರಣಕ್ರಿಯೆಯು ನಡೆದಿರುವ ವಿಧಾನವೇ ಬೇರೆ. ಇಂಗ್ಲಿಷಿನಲ್ಲಿ ಬ್ಲಾಟಿಂಗ್ ಎಂದರೆ 'ಮಸಿಹೀರುವ' ಎಂದೂ ಪೇಪರ್ ಎಂಬುದಕ್ಕೆ ಕಾಗದ ಎಂದೂ ಅನುವಾದ ಮಾಡಿಕೊಂಡು ಎರಡನ್ನೂ ಕೂಡಿಸಿ ಮಸಿಹೀರುವ ಕಾಗದ ಎಂದು ಮಾಡಬಹುದು. ಆದರೆ ಕನ್ನಡದಲ್ಲಿ ಹಾಗೆ ಮಾಡದೆ ಒತ್ತುಕಾಗದ ಎಂದು ಮಾಡಿಕೊಂಡಿದ್ದಾರೆ. ಇಲ್ಲಿ ಬ್ಲಾಟಿಂಗ್ ಎಂಬುದರ ಕಾರ್ಯಕ್ರಿಯೆಯನ್ನು ಕೈಬಿಟ್ಟು, ನಾವು ಮಾಡುವ ಕ್ರಿಯೆಯನ್ನು ಮಾತ್ರ ಪರಿಗಣಿಸಲಾಗಿದೆ.

**ಕಲ್ಲಿದ್ದಲು** : ಅನ್ಯದೇಶ್ಯ ನಿಷ್ಪನ್ನ ಶಬ್ದ. ಇಂಗ್ಲಿಷಿನಿಂದ ಸ್ವೀಕೃತವಾದ ಈ ವಸ್ತುವಿಗೆ ಮೂಲದಲ್ಲಿ ಕೋಲ್ ಎಂದು ಹೆಸರು. ಕೋಲ್ ಎಂಬುದು ಇಂಗ್ಲಿಷರು ಬಂದನಂತರ ಭಾರತೀಯರಿಗೆ ತಿಳಿದ ವಸ್ತು. ವಸ್ತುವಿನೊಡನೆ ಅದರ ಹೆಸರು ಹಿಂಬಾಲಿಸಿಯೇ ಬರುತ್ತದಲ್ಲವೆ ? ಕೋಲ್ ಎಂಬ ವಸ್ತುವು ಕಪ್ಪು ಬಣ್ಣದ ಇಂಧನ, ಸೌದೆಯಂತೆ, ಇದ್ದಲಿನಂತೆ ಕಪ್ಪಾಗಿತ್ತು ಮತ್ತು ಕಲ್ಲಿನಂತೆ ಗಟ್ಟಿಯಾಗಿತ್ತು. ಕಪ್ಪುಬಣ್ಣ ಮತ್ತು ಗಡಸುತನ ಎಂಬ ಎರಡು ಗುಣಗಳನ್ನೂ ಒಳಗೊಂಡ ಕೋಲ್‌ಗೆ ಕನ್ನಡದಲ್ಲಿ ಕಲ್ಲು+ಇದ್ದಲು= ಕಲ್ಲಿದ್ದಲು ಎಂಬ ಹೆಸರು ಪ್ರಾಪ್ತವಾಯಿತು. ಒಂದು ವಸ್ತುವಿನ ಗುಣ ಮತ್ತು ಕ್ರಿಯೆಗಳನ್ನು ಆಧರಿಸಿ ನಮ್ಮ ಭಾಷೆಯಲ್ಲಿದ್ದ ಶಬ್ದಗಳನ್ನು ಸೇರಿಸಿ ಸಮಾಸಶಬ್ದವನ್ನು ಸೃಷ್ಟಿಮಾಡಿ, ದೇಶ್ಯವೆಂಬಂತೆ ಪ್ರಯೋಗಿಸುವ ವೈಶಿಷ್ಟ್ಯವನ್ನು ತಿಳಿಯುವುದೇ ಒಂದು ವಿಸ್ಮಯ ಎನ್ನಬಹುದು.

**ಗುಂಡು ಸೂಜಿ** : ಇದು ಇಂಗ್ಲಿಷ್ ಭಾಷೆಯಿಂದ ನಿಷ್ಪನ್ನವಾದ ಶಬ್ದ. ಒತ್ತುಕಾಗದ ಎಂಬ ಶಬ್ದದ ಬಗ್ಗೆ ಹೇಳಿರುವುದನ್ನು ಅನ್ವಯಿಸಿ ನೋಡಬಹುದು. ಅದೇ ತತ್ತ್ವದ ಪ್ರಕಾರ ರೌಂಡ್‌ಪಿನ್ ಎಂಬುದು ಗುಂಡುಸೂಜಿ ಎಂಬ ರೂಪವನ್ನು ತಾಳಿದೆ.

**ಚಾಟಿ** : ಈ ಶಬ್ದವೂ ಕೂಡ ದೇಶ್ಯವೇ ಆಗಿದ್ದು ಸಂಸ್ಕೃತಕ್ಕೆ ಹೋಗಿರಬಹುದು. ಆದರೆ ಸಾಂಪ್ರದಾಯಿಕವಾಗಿ ವಿವರಿಸುವ ರೀತಿಯಲ್ಲಿ ಈ ಶಬ್ದವು ಸಂಸ್ಕೃತದಿಂದ ಕನ್ನಡಕ್ಕೆ ತದ್ಭವವಾಗಿ ಬಂದಿದೆ ಎಂದು ನಂಬಲಾಗಿದೆ. ಇದರ ಪ್ರಕಾರ ಚರ್ಮಪಟ್ಟಿಕಾ ಎಂಬುದು ಚಮ್ಮಪಟ್ಟಿಗೆ > ಚಮ್ಮಟಿಗೆ > ಚಮ್ಮಟಿ > ಚಾವಟಿ > ಚಾಟಿ ಎಂಬ ರೂಪಾಂತರಗಳನ್ನು ತೋರಿಸಲಾಗಿದೆ. ಇದು ಒಂದು ಕೋಲಿಗೆ ಚರ್ಮದ ದಾರವನ್ನು ಬಿಗಿದು ದನಗಳನ್ನು ಹೊಡೆಯಲು ಮಾಡಿಕೊಂಡ

ಏರ್ಪಾಡು. ಇದನ್ನು ಬಾರುಕೋಲು ಎಂದೂ ಕರೆಯುತ್ತಾರೆ. ಬಾರು ಎಂದರೆ ಚರ್ಮ ಎಂದೇ ಅರ್ಥವಿದೆ.

**ತಂಬಾಕು** : ಇದು ಅನ್ಯದೇಶ್ಯ ಶಬ್ದ, ಪೋರ್ಚುಗೀಸಿನಿಂದ ಹಿಂದಿ, ಮರಾಠಿಗಳ ಮೂಲಕ ಕನ್ನಡಕ್ಕೆ ಬಂದಿದೆ, ಪೋರ್ಚುಗೀಸ್ ಭಾಷೆಯಲ್ಲಿ ಟಬಕೊ ಎಂಬ ಶಬ್ದವಿದೆ, ಸ್ಪ್ಯಾನಿಷ್ ಭಾಷೆಯಲ್ಲಿಯೂ ಈ ಶಬ್ದವಿದೆ. ಅಷ್ಟೇ ಅಲ್ಲ ಇದು ಜಪಾನೀ ಭಾಷೆಗೂ ಹೋಗಿ ಅಲ್ಲಿ ತಾಬಾಕೊ ಎನ್ನಿಸಿಕೊಂಡಿದೆ. ಹಿಂದಿಯಲ್ಲಿ ತಂಬಾಕೂ, ತಮಾಕೂ ಎಂಬ ಶಬ್ದಗಳಿವೆ, ಮರಾಠಿಯಲ್ಲಿ ತಂಬಾಕೂ, ತಂಬಾಖು, ತಮಾಖೂ ಎಂಬ ಶಬ್ದರೂಪಗಳಿವೆ. ಕನ್ನಡದಲ್ಲಿ 'ಹೊಗೆಸೊಪ್ಪು' ಎಂಬ ಶಬ್ದವಿದೆ. ತಂಬಾಕು ಎಂಬ ಶಬ್ದದ ಚಲಾವಣೆಯೂ ಇದೆ. ಪತ್ರಿಕಾಮಾಧ್ಯಮಗಳು ಕಛೇರಿ ಪತ್ರವ್ಯವಹಾರ ಮುಂತಾದುವುಗಳಲ್ಲಿ ತಂಬಾಕು ಶಬ್ದವೇ ಬಳಕೆಯಲ್ಲಿದೆ. ತಂಬಾಕಿನ ಸೊಪ್ಪನ್ನು ನೇತುಹಾಕಿ ಬ್ಯಾಲನ್‌ಗಳಲ್ಲಿ ಹೊಗೆಯ ಶಾಖವನ್ನು ಕೊಡುವುದರಿಂದ ಹೊಗೆಸೊಪ್ಪು ಎಂಬ ಶಬ್ದವು ರೂಢಿಗೆ ಬಂದಿರಬೇಕು, ಇದು ಒಂದುರೀತಿ ವಿವರಣಾತ್ಮಕವಾದ ಶಬ್ದವಾಗಿದೆ. ಧಾರವಾಡ ಕನ್ನಡದಲ್ಲಿ ತಂಬಾಕ ಎಂಬುದು, ಮೈಸೂರಿನ ಕಡೆ ತಂಬಾಕು ಆಗಿದೆ.

**ತಿಂಡಿ** : ಇದು ದೇಶ್ಯ ಶಬ್ದ, ಪ್ರಾದೇಶಿಕವಾದ ಅರ್ಥವ್ಯತ್ಯಾಸವನ್ನು ಹೊಂದಿದೆ. ಕರ್ನಾಟಕದ ಉತ್ತರಭಾಗದಲ್ಲಿ ತಿಂಡಿ ಎಂಬುದು ನವೆ, ಕಡಿತ, ತುರಿಕೆ ಮುಂತಾದ ಅರ್ಥವನ್ನು ಹೊಂದಿದೆ. ಇದರಿಂದಲೇ ತೀಟೆ ಎಂಬ ಶಬ್ದವೂ ಹುಟ್ಟಿದೆ. ಕನ್ನಡದಲ್ಲಿ 'ತೀನ್' ಎಂಬ ಶಬ್ದಕ್ಕೆ ನವೆ, ತುರಿಕೆ ಎಂಬ ಅರ್ಥವಿರುವುದರಿಂದ ಧಾರವಾಡದ ಕಡೆ 'ತಿಂಡಿ' ಎಂದು ಕರೆಯುವುದು ಸಮರ್ಪಕವಾಗಿದೆ. ಕರ್ನಾಟಕದ ದಕ್ಷಿಣ ಭಾಗದಲ್ಲಿ ತಿಂಡಿ ಎಂದರೆ ಟಿಫಿನ್, ಲಘು ಉಪಾಹಾರ ಎಂಬ ಅರ್ಥದಲ್ಲಿ ಬಳಸಲಾಗುತ್ತದೆ. ತಿನ್ ಎಂಬ ಧಾತುವಿನಿಂದ ಹುಟ್ಟಿರುವ ತಿಂಡಿ ಶಬ್ದವನ್ನು ಮೈಸೂರಿನ ಕಡೆ ಬಳಸುತ್ತಿರುವುದೂ ಸಮರ್ಪಕವಾಗಿದೆ. ಧಾರವಾಡ ಕನ್ನಡದಲ್ಲಿರುವ ತೀನ್ ಪದದಿಂದ ತಿಂಡಿ ಹುಟ್ಟಿದೆ ಎಂಬುದಕ್ಕಿಂತ ತಿನ್ > ತಿಂಡಿ ಎಂಬುದು ಹೆಚ್ಚು ಸಮರ್ಪಕವಾಗಿ ಕಂಡುಬರುತ್ತದೆ. ತೀನ್ ಎಂಬುದು ತೀಟೆ ಎಂಬುದರಿಂದ ತೀಂಡಿ ಎಂಬ ಶಬ್ದವು ಹುಟ್ಟಿ, ತನ್ಮೂಲಕ ತಿಂಡಿ ಎಂಬ ರೂಪವು ಬಳಕೆಗೆ ಬಂದಿರಬಹುದು. ಒಟ್ಟಾರೆ ಪ್ರಾದೇಶಿಕ ಭೇದವನ್ನು ಒಳಗೊಂಡಿರುವ ಈ ಶಬ್ದವು ವಿಶಿಷ್ಟವಾದುದೇ ಆಗಿದೆ.

**ಪರಿಸೆ** : ಇದು ಸಂಸ್ಕೃತದ ತದ್ಭವ ಶಬ್ದ, ಮೂಲದ ಶಬ್ದ ಪರಿಷತ್ (ದ್). ಈ ಶಬ್ದವು ಪ್ರಾಕೃತದಲ್ಲಿ ಪರಿಸಾ ಎಂದಾಗುತ್ತದೆ. ಇದಕ್ಕೆ ಪರಿಷೆ ಪರಿಶೆ, ಮುಂತಾದ ರೂಪಗಳೂ ಇವೆ. ಸಂಸ್ಕೃತದಿಂದ ನೇರವಾಗಿ ಇದು ಕನ್ನಡಕ್ಕೆ ಬಂದಿರಬಹುದು. ಪರಿಷತ್ - ಪರಿಷೆ > ಪರಿಸೆ ಎಂದು ರೂಪಾಂತರವಾಗಿರಬಹುದು. ಮೂಲದಲ್ಲಿ ವಿದ್ವಾಂಸರ ಗುಂಪಿಗೆ ಪರಿಷತ್ ಎಂಬ ಅರ್ಥವಿದೆ, ಕನ್ನಡ ಸಾಹಿತ್ಯ ಪರಿಷತ್ತು ಎಂಬುದನ್ನು ಕೇಳಿದ್ದೀರಿ. ವಿಧಾನ್ ಪರಿಷತ್ ಎಂಬುದೂ ನಿಮಗೆ ಗೊತ್ತಿದೆ, ಇವೆಲ್ಲಾ ನೇರವಾಗಿ ತತ್ಸಮವೇ ಆಗಿ ಕನ್ನಡಕ್ಕೆ ಬಂದಿದೆ, ಹೀಗೆ ತತ್ಸಮವಾಗಿ ಬಂದಾಗ ಮೂಲದಲ್ಲಿರುವ ಅರ್ಥವೇ ವರ್ಗವಾಗಿ ಬಂದಿರುತ್ತದೆ. ಆದರೆ ತದ್ಭವವಾಗಿ ಬಂದಾಗ ಅರ್ಥವ್ಯತ್ಯಾಸವುಂಟಾಗುತ್ತದೆ. ಪರಿಸೆ ಎಂದರೆ ಜಾತ್ರೆ, ಉತ್ಸವ ಎಂದೂ ಆಗುತ್ತದೆ. ಸಂತೆಗೂ ಈ ಮಾತು ಅನ್ವಯಿಸುತ್ತದೆ. ಬೆಂಗಳೂರಿನ ಕಡ್ಲೆಕಾಯಿ ಪರಿಸೆ ಎಂಬುದನ್ನು ನೀವೂ ಕೇಳಿರುತ್ತೀರಿ. ಆದ್ದರಿಂದ ತದ್ಭವವಾಗಿ ಬಂದಾಗ ಮೂಲಶಬ್ದದ ಅರ್ಥಗಾಂಭೀರ್ಯ ಕಂಡುಬರುವುದಿಲ್ಲ ಎಂಬುದು ವಾಸ್ತವದ ವಿಚಾರವಾಗಿದೆ.

**ಪುಸ್ತಕ** : ಇದು ಅನ್ಯ ದೇಶ್ಯ ಶಬ್ದ. ಆದರೆ ಕೆಲವರು ಹೇಳುವಂತೆ ಇದು ಸಂಸ್ಕೃತದಿಂದ ಕನ್ನಡಕ್ಕೆ ಬಂದಿಲ್ಲ. ಏಕೆಂದರೆ ಪುಸ್ತಕ ಎಂಬ ಶಬ್ದವು ಪ್ರಾಚೀನ ಸಂಸ್ಕೃತ ಗ್ರಂಥಗಳಲ್ಲಾಗಲೀ ಪಾಣಿನಿಯ ವ್ಯಾಕರಣದಲ್ಲಾಗಲೀ ಕಂಡುಬರುವುದಿಲ್ಲ. ಅಮರಕೋಶವು ಸಂಸ್ಕೃತದ ಅತಿ ಮುಖ್ಯವಾದ ಗ್ರಂಥ. ಅಂಥ ಗ್ರಂಥದಲ್ಲಿಯೂ ಪುಸ್ತಕ ಎಂಬ ಶಬ್ದವು ಕಂಡುಬರುವುದಿಲ್ಲ ಎಂದು ತಿಳಿದುಬರುತ್ತದೆ. 5 ನೇ ಶತಮಾನದಲ್ಲಿ ರಚಿತವಾಗಿರುವ ಹರ್ಷಚರಿತೆ ಎಂಬ ಗ್ರಂಥದಲ್ಲಿ ಪುಸ್ತಕ ಎಂಬ ಶಬ್ದವು ಕಂಡುಬರುತ್ತದೆ.

ತುರ್ಕಿಭಾಷೆಯಲ್ಲಿ ಪೋಸ್ತ್ ಎಂಬ ಶಬ್ದವಿದೆ. ಪೋಸ್ತ್ ಎಂದರೆ ಹದಮಾಡಿದ ಕುರಿಚರ್ಮ. ಇರಾನ್ ಮುಂತಾದ ದೇಶಗಳಲ್ಲಿ ದಾಖಲೆಗಳನ್ನು ಬರೆದಿಡಲು ಹದಮಾಡಿದ ಕುರಿಚರ್ಮವನ್ನು ಬಳಸುತ್ತಿದ್ದರು. ಪರ್ಷಿಯನ್ ಭಾಷೆಯ ಮೂಲಕ ಭಾರತವನ್ನು ಪ್ರವೇಶಿಸಿದ ಈ ಶಬ್ದವು ಹಿಂದಿ, ಗುಜರಾತಿ ಭಾಷೆಗಳಿಗೆ ಮೊದಲು ಸೇರಿತು ಅಲ್ಲಿ ಪೋಥಾ, ಪೋಥೀ ಎಂಬ ಹೆಸರು ಪಡೆದು ಪ್ರಕೃತದ ಮೂಲಕ ಕನ್ನಡಕ್ಕೆ ಪೊತ್ತಗೆ ಎಂಬ ರೂಪದಲ್ಲಿ ಬಂದಿತು. ಪೊತ್ತಗೆ ಎಂಬುದು ಹೊತ್ತಗೆ ಎಂಬ ರೂಪಾಂತರವನ್ನು ಪಡೆಯಿತು. ಪ್ರಾಕೃತದಿಂದ ಸಂಸ್ಕೃತಕ್ಕೆ ಹೋದ ಈ ಶಬ್ದ ಪುಸ್ತಕ ಎಂಬರೂಪವನ್ನು ಪಡೆದು ಪುನಃ ಕನ್ನಡಕ್ಕೆ ಪುಸ್ತಕವೇ ಆಗಿ ಬಂದಿತು.

**ಮೈಸೂರು ಪಾಕ್** : ಇದು ಅನ್ಯದೇಶ್ಯ ಶಬ್ದವಾಗಿರುವಂತೆಯೇ ಬಹಳ ವಿಚಿತ್ರವಾದ ಶಬ್ದವೂ ಆಗಿದೆ. ವಾಸ್ತವವಾಗಿ ಅದು ಮೈಸೂರಿಗೆ ಸಂಬಂಧಪಟ್ಟಿರುವುದು ಕೇವಲ ತಪ್ಪುಸಾಹಚರ್ಯದಿಂದ. ಉರ್ದು ಭಾಷೆಯಲ್ಲಿ ಮೆಸ್ಸೂರ್ ಎಂದರೆ ಕಡಲೆಹಿಟ್ಟು. ಈ ಶಬ್ದವು ಮರಾಠಿಗೆ ಹೋಗಿ ಅಲ್ಲಿಂದ ಕನ್ನಡಕ್ಕೆ ಬಂದಿತು. ಹೈದರಾಲಿ, ಟಿಪ್ಪು ಆಳ್ವಿಕೆಯನ್ನು ಕಂಡ ನೆಲಕ್ಕೆ ಉರ್ದುಭಾಷೆಯಿಂದಲೇ ಮೆಸ್ಸೂರ್ ಎಂಬುದು ಬಂದಿರಬಹುದು. ಮೆಸ್ಸೂರ್ ನಿಂದ ತಯಾರಾದ ಪಾಕವನ್ನು ಮೆಸ್ಸೂರ್ ಪಾಕ್ ಎಂದು ಕರೆದಿರಬಹುದು. ಮೆಸ್ಸೂರ್ ಮತ್ತು ಮೈಸೂರ್ ಎಂಬ ಶಬ್ದಗಳ ಧ್ವನಿಗಳು ತುಂಬಾ ಹತ್ತಿರದಲ್ಲಿರುವುದರಿಂದ ಒಂದಕ್ಕೆ ಬದಲು ಇನ್ನೊಂದು ಬಳಕೆಗೆ ಬಂದಿರಬಹುದು. ಹೀಗಾಗಿ ಮೈಸೂರ್ ಪಾಕ್ ತಿಂಡಿಯ ಹೆಸರು ಮೈಸೂರಿನ ಹೆಸರಿನೊಡನೆ ಅವಿನಾಭಾವದಿಂದ ಸೇರಿಕೊಂಡು ಬಂದಿದೆ.

**ಸಾಬೂನು** : ಇದು ಅನ್ಯದೇಶ್ಯ ಶಬ್ದ, ಲ್ಯಾಟಿನ್ ಭಾಷೆಯಲ್ಲಿ ಸ್ಯಾಪೋ ಎಂಬ ಶಬ್ದವಿದೆ. ಪೋರ್ಚುಗೀಸ್ ಭಾಷೆಯಲ್ಲಿ ಸಬಾವೋ ಎಂಬ ಕರೆಯುವ ವಸ್ತುವಿದೆ. ಅವರು ಭಾರತಕ್ಕೆ ಬಂದಾಗ ಅದನ್ನೂ ತಂದರು. ಆ ವಸ್ತುವನ್ನು ಅವರು ತೊಳೆಯುವ ಕೆಲಸಕ್ಕೆ ಬಳಸುತ್ತಿದ್ದುದನ್ನು ಜನರು ಗಮನಿಸಿದರು. ಈ ವಸ್ತುವು ಪರ್ಷಿಯನ್ ಭಾಷೆಯಲ್ಲಿ ಶಾಬೂನ್ ಎಂಬ ಹೆಸರನ್ನು ಹೊಂದಿದೆ. ಅರ್ಯಾಬಿಕ್‌ನಲ್ಲಿ ಇದನ್ನು ಶಬೋನ್ ಎನ್ನುತ್ತಾರೆ, ಟರ್ಕಿಭಾಷೆಯಲ್ಲಿ ಶಾಬನ್ ಎನ್ನುತ್ತಾರೆ. ಮರಾಠಿ ಭಾಷೆಯಲ್ಲಿ ಸಾಬಣೆ, ಸಾಬಣ ಎಂಬ ಶಬ್ದಗಳಿವೆ. ಕನ್ನಡಿಗರು ಇದನ್ನು ಸಾಬೂನು ಎನ್ನುತ್ತಾರೆ. ಧಾರವಾಡದ ಕಡೆ ಇದನ್ನು ಸಬಕಾರ, ಎಂದೂ ಹೇಳುತ್ತಾರೆ. ಸಾಬೂನು ಎಂಬ ಶಬ್ದ ಇದ್ದರೂ ಅಕ್ಷರಸ್ಥರು ಅನಕ್ಷರಸ್ಥರು ಎಲ್ಲರೂ ಸಾಬೂನು ಎಂಬ ಮಾತನ್ನು ಬಳಸದೆ ಸೋಪು ಎಂಬ ಇಂಗ್ಲಿಷ್ ಪದವನ್ನೇ ಬಳಸುತ್ತಿರುವುದನ್ನು ಕಾಣುತ್ತೇವೆ. ಮುಂದೆ ಒಂದುದಿನ ಸೋಪು ಎಂಬ ಶಬ್ದವೇ ಸಾರ್ವತ್ರಿಕವಾಗಿ ಬಳಕೆಗೆ ಬಂದು ಶಬ್ದಕೋಶದೊಳಕ್ಕ ಪ್ರವೇಶ ಪಡೆದುಕೊಳ್ಳಬಹುದು. ಹಾಗಾದರೂ ಆಶ್ಚರ್ಯ ಪಡಬೇಕಾಗಿಲ್ಲ. ಏಕೆಂದರೆ ಜೀವಂತ ಭಾಷೆಯೇ ಹೀಗೆ ವರ್ತಿಸುತ್ತದೆ. ಅದು ನಿಂತ ನೀರಲ್ಲ ಎನ್ನುವುದನ್ನೂ ನೀವು ತಿಳಿದಿದ್ದೀರಿ.

**ಸೀಮೆ ಎಣ್ಣೆ** : ಇದು ಒಂದು ವಿವರಣಾತ್ಮಕವಾದ ಶಬ್ದ. ಶಬ್ದಗಳು ಕನ್ನಡವೇ ಆದರೂ, ಶಬ್ದದ ಸೃಷ್ಟಿಗೆ ಪ್ರೇರಣೆ ಇಂಗ್ಲಿಷಿನಿಂದ ದೊರೆಯಿತು ನಮ್ಮಲ್ಲಿ ಇಲ್ಲದ ವಸ್ತು ನಮಗೆ ದೊರೆತಾಗ ಅದಕ್ಕೆ ಹೆಸರನ್ನು ಕೊಡುವುದು ಸಹಜವಾದ ಕಾರ್ಯ. ಹಾಗೆ ಹೆಸರು ಕೊಡುವಾಗ ಹಲವು ರೀತಿಗಳನ್ನು ಅನುಸರಿಸುವುದನ್ನು ಹಿಂದಿನ ಪಾಠದಲ್ಲಿ ಓದಿದ್ದೀರಿ. ಆ ವಸ್ತುವು ಹೇಗಿದೆ ಎಂಬುದನ್ನು ಮತ್ತು ಎಲ್ಲಿಂದ ಬಂತು ಎಂಬುದನ್ನು ತಿಳಿದು ಹೊಸಪದವನ್ನು ಟಂಕಿಸಲಾಗುತ್ತದೆ. ಆ ವಸ್ತುವು ಎಣ್ಣೆಯ ಹಾಗೆ ಇದೆ ಮತ್ತು ವಿದೇಶದಿಂದ ಬಂದಿದೆ ಎಂಬುದನ್ನು ಗಮನಿಸಿ ಅದಕ್ಕೆ ಸೀಮೆಎಣ್ಣೆ ಎಂಬ ಹೆಸರು ಕೊಡಲಾಯಿತು. ವಿದೇಶಕ್ಕೆ ಸೀಮೆ, ವಿಲಾಯಿ ಎಂಬ ಹೆಸರುಗಳೂ ಇವೆ. ಇದೇ ನಿಯಮಾನುಸಾರವಾಗಿ ಸೀಮೆಅಕ್ಕಿ, ಸೀಮೆ ಹಸು, ಸೀಮೆ ಸುಣ್ಣ ಎಂಬ ಶಬ್ದಗಳೂ ಸೃಷ್ಟಿಯಾಗಿವೆ. ಈ ಶಬ್ದಗಳು ಎಲ್ಲ ಕನ್ನಡ ಶಬ್ದಕೋಶಗಳಲ್ಲಿ ಇನ್ನೂ ದಾಖಲಾಗಿಲ್ಲ.

**ಸೀರೆ** : ಇದು ಅನ್ಯದೇಶ್ಯ ಶಬ್ದ. ಕುಪ್ಪಸದಂತೆಯೇ ಇದೂ ಕೂಡ ಸ್ತ್ರೀಯರಿಗೆ ಮೀಸಲಾದ ವಸ್ತ್ರವಾಗಿರಲಿಲ್ಲ. ಸಂಸ್ಕೃತದಲ್ಲಿ ಚೀರಾ ಎಂದರೆ ಹೊಲೆಯದ ಬಟ್ಟೆ ಅಥವಾ ಬಟ್ಟೆಯ ತುಂಡು. ಅದನ್ನು ಯತಿಗಳು ದೇಹಕ್ಕೆ ಸುತ್ತಿಕೊಳ್ಳುತ್ತಿದ್ದರು. ಚೀರವನ್ನು ಮೊದಲು ಮರಗಳ ತೊಗಟೆಯಿಂದ ತಯಾರಿಸುತ್ತಿದ್ದರು. ಅದು ಒರಟಾಗಿರುತ್ತಿತ್ತು. ಆದ್ದರಿಂದ ಸನ್ಯಾಸಿಗಳು ಅದನ್ನು ಉಡುತ್ತಿದ್ದರು. ಕಾಲಕ್ರಮೇಣ ಯತಿಗಳು ಮಾತ್ರ ಉಡುವ ಒರಟಾದ ಬಟ್ಟೆಗೆ ಸಲ್ಲುತ್ತಿದ್ದ ಚೀರ ಎಂಬ ಹೆಸರು, ಹತ್ತಿ ಮತ್ತು ರೇಷ್ಮೆಗಳ ಎಳೆಯಿಂದ ತಯಾರಾಗುವ ವಸ್ತ್ರಗಳಿಗೂ ಅನ್ವಯವಾಯಿತು ಮತ್ತು ಸ್ತ್ರೀಯರು ಉಡುವ ವಸ್ತ್ರಕ್ಕೆ ಮಾತ್ರ ಸೀಮಿತವಾಯಿತು. ಚೀರ ಯಾರು ಬೇಕಾದರೂ ಉಡುವ ಬಟ್ಟೆಯಾಗಿದ್ದುದು ಈಗ ಸ್ತ್ರೀಯರು ಉಡುವ ಸೀರೆ ಎಂಬ ಬಟ್ಟೆಯಾಯಿತು. ಇಂಗ್ಲಿಷಿನಲ್ಲಿ ಇದನ್ನು ಸ್ಯಾರಿ ಎಂದು ಕರೆಯುವುದನ್ನು ಕೇಳುತ್ತೇವೆ. ಹಿಂದಿಯಲ್ಲಿ ಸಾಢಿ ಎಂಬ ಶಬ್ದವಿರುವುದು ಬಹುಶಃ ಸಂಸ್ಕೃತದ 'ಶಾಟಿ' ಎಂಬುದರಿಂದ ಬಂದಿರಬಹುದು. ಶಾಟಿ ಎಂದರೆ ಒರಟು ಬಟ್ಟೆ, ಶಾಟಿ ಎಂಬುದೇ ಹಿಂದಿಯಲ್ಲಿ ಸಾಢಿಯಾಗಿದೆ. ಹೀಗೆ ಸೀರೆ ಎಂಬ ಪದದ ಅರ್ಥವು ಮೊದಲು ವಿಸ್ತಾರವಾಗಿದ್ದುದು ಈಗ ಸೀಮಿತವಾಗಿದೆ.

## 4.6. ಸ್ವಪರೀಕ್ಷಾ ಪ್ರಶ್ನೆಗಳು

೧. ದೇಶ್ಯ ಶಬ್ದಗಳು ಎಂದರೇನು ?

........................................................................................................

........................................................................................................

೨. ಕೃದಂತಗಳು ಎಂದರೇನು ?

........................................................................................................

........................................................................................................

೩. ತದ್ಧಿತಾಂತಗಳಿಗೆ ಎರಡು ಉದಾಹರಣೆ ಕೊಡಿರಿ.

........................................................................................................

........................................................................................................

೪. ಸಂಸ್ಕೃತ ತತ್ಸಮಗಳು ಎಂದರೇನು ?

..........................................................................................................

..........................................................................................................

೫. ಇಂಗ್ಲಿಷ್ ತದ್ಭವಗಳು ಎಂದರೇನು ?

..........................................................................................................

..........................................................................................................

## 4.7. ಸಾರಾಂಶ

ಪ್ರಸ್ತುತ ಘಟಕದಲ್ಲಿ ಮುಖ್ಯವಾಗಿ ಕನ್ನಡ ಶಬ್ದಕೋಶದ ಬೆಳವಣಿಗೆಯನ್ನು ಪ್ರಸ್ತಾಪಿಸಲಾಗಿದೆ. ಜೀವಂತ ಭಾಷೆ ಸದಾಕಾಲ ಅಗತ್ಯಕ್ಕೆ ತಕ್ಕ ಬದಲಾವಣೆಗಳನ್ನು ಮಾಡಿಕೊಳ್ಳುತ್ತಲೇ ಇರುತ್ತದೆ. ಒಂದು ಭಾಷೆಯು ಒಳಗೆಯೆ ಆಗುವ ಬದಲಾವಣೆ ಒಂದೆಡೆಯಾದರೆ ಅನ್ಯಭಾಷಾ ಸಂಸರ್ಗದಿಂದಲೂ ಭಾಷಿಕ ಬದಲಾವಣೆಗಳು ಏರ್ಪಡುತ್ತವೆ. ವ್ಯಾಕರಣ ಪ್ರಕ್ರಿಯೆಗಳ ಮೇಲೂ ಇತರ ಭಾಷೆಗಳ ಪ್ರಭಾವ ಉಂಟಾಗುವ ಸಾಧ್ಯತೆ ಇದೆ. ಒಂದು ಭಾಷೆಗೆ ಬಂದು ಸೇರುವ ಪದಗಳನ್ನು ತತ್ಸಮ ತದ್ಭವ ಎಂದು ಎರಡು ವರ್ಗಗಳನ್ನಾಗಿ ಮಾಡಲಾಗುತ್ತದೆ. ಹೀಗೆ ಬಂದ ಪದಗಳು ರೂಪ ಮತ್ತು ಅರ್ಥಗಳಲ್ಲಿ ವ್ಯತ್ಯಾಸ ಹೊಂದುವುದನ್ನು ಕಾಣಬಹುದು. ಕನ್ನಡಕ್ಕೆ ಸಂಸ್ಕೃತ ಭಾಷೆಯಿಂದ ಅಸಂಖ್ಯಾತ ಪದಗಳನ್ನು ಎರವಲಾಗಿ ಪಡೆಯಲಾಗಿದೆ. ಹೀಗೆ ಅಸಂಖ್ಯಾತ ಪದಗಳು ಹೊಸಗನ್ನಡಕ್ಕೆ ಬಂದದು ಇಂಗ್ಲಿಷ್ ಭಾಷೆಯಿಂದ. ಸಂಸ್ಕೃತ ಮತ್ತು ಇಂಗ್ಲಿಷ್ ಭಾಷೆಗಳಲ್ಲದೆ ಹಿಂದೂಸ್ತಾನಿ, ಅರೆಬಿ, ಪೋರ್ಚುಗೀಸ್ ಮೊದಲಾದ ಭಾಷೆಗಳ ಪದಗಳೂ ಕನ್ನಡವಲ್ಲಿ ಪ್ರಯೋಗದಲ್ಲಿವೆ. ಶಬ್ದಕೋಶದ ಬೆಳವಣಿಗೆಗೆ ಅನ್ಯದೇಶ್ಯಗಳ ಸೇರ್ಪಡೆ ಗಮನಾರ್ಹ ಕೊಡುಗೆಯನ್ನು ನೀಡುತ್ತದೆ ಎಂಬುದನ್ನು ಗಮನಿಸಬೇಕು.

(ಈ ಘಟಕದ ಪಾಠ ಸಿದ್ಧತೆಗೆ ಮುಕ್ತ ವಿಶ್ವವಿದ್ಯಾನಿಲಯದ ಹಳೆಯ ಪಾಠಗಳ ನೆರವನ್ನೂ ಪಡೆಯಲಾಗಿದೆ)

ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯದ ಪ್ರಾದೇಶಿಕ ಹಾಗೂ ಅಧ್ಯಯನ ಕೇಂದ್ರಗಳು

**Regional and Study Centres of Karnataka State Open University**




(ನಮೂದಿಸಿರುವ ಅಂಕಿ - ಜಿಲ್ಲೆಯಲ್ಲಿರುವ ಒಟ್ಟು ಅಧ್ಯಯನ ಕೇಂದ್ರಗಳ ಸಂಖ್ಯೆಯನ್ನು ಸೂಚಿಸುತ್ತದೆ.)

(The Number indicate the total number of study Centres existing in that districts.)

